ISSN 2320 - 9941

ಸಾಹಿತ್ಯ-ಸಂಸ್ಕೃತಿ ಮಾಸಿಕ

# ಪ್ರತಿಸ್ಪಂದ

ಬೆಲೆ : 10 ರೂ

## ಕೊಡು - ಕೊಳ್ಳುವಿಕೆಗಳ ಸಂಕರ ...

ಸಂಪುಟ : 1 ಸಂಚಿಕೆ : 10 ಅಕ್ಟೋಬರ್ 2013

'ಹೆಣ್ಣು ಮತ್ತು ಸಂಸ್ಕೃತಿ'ಗೆ ಸಂಬಂಧಿಸಿದ ಸ್ತ್ರೀವಾದಿ ಸಂಸ್ಕೃತಿಚಿಂತನೆಗಳ ವಿಶ್ಲೇಷಣೆ





ಮೂರು ಮುಖಗಳು



**Juxtaposition**




**Read and Relax, Please :**
ಹೆನ್ರಿ ಡೇವಿಡ್ ಥೋರೋ ವಿನ 'ಓದು'

# ಪ್ರತಿಸ್ಪಂದ

ಅಕ್ಟೋಬರ್ 2013
ಸಂಪುಟ : 1 ಸಂಚಿಕೆ : 10

**ಸಂಪಾದಕರು:**
ಕೆ.ಆರ್. ಬಸವರಾಜು
ತೋಟದ ಮನೆ ನಂ: 107 (25)
ಕಂಚಾಘಟ್ಟ ಹೊಸ ಬಡಾವಣೆ
ತಿಪಟೂರು – 572201
ಮೊ : 9481492481, 9945521522
ಇ–ಮೇಲ್ : prathispandha@gmail.com

**ಮುದ್ರಕರು:**
ಟಿ.ಡಿ.ರಾಮು
ನಿಟ್ಟೂರು,
ಮೊ : 9880951125

**ಚಂದಾ ವಿವರ:**

| | |
|---|---|
| ಬಿಡಿ ಪ್ರತಿ | 10 ರೂ |
| ವಾರ್ಷಿಕ ಚಂದಾ | 120 ರೂ |
| ಸಂಸ್ಥೆಗಳಿಗೆ | 150 ರೂ |

ಚಂದಾ ಹಣವನ್ನು ಸಂಪಾದಕರ ವಿಳಾಸಕ್ಕೆ ನಗದು, ಎಂ.ಓ., ಅಥವಾ ಡಿ.ಡಿ. ಮೂಲಕ ಕಳುಹಿಸಬಹುದು.
ಚಂದಾಹಣವನ್ನು ಕಳುಹಿಸುವವರು ತಮ್ಮ ಅಂಚೆ ವಿಳಾಸವನ್ನು ಸ್ಪುಟವಾಗಿ ಬರೆಯಿರಿ.

**ಒಳಪುಟಗಳಲ್ಲಿ**





# ನಿಮ್ಮೊಂದಿಗೆ ....

***"Politics is the way we react everyday with other people and how we respect the dignity of other people".***

- Costa Gavras,
Greece Film Maker.

ಇತ್ತೀಚಿಗೆ ಯುರೋಪಿನ ಸಂಸತ್ತು ಒಂದು ಅಮೂಲ್ಯವಾದ ನಿರ್ಣಯಕ್ಕೆ ಬದ್ಧವಾಯಿತು. 766 ಸದಸ್ಯರನ್ನು ಒಳಗೊಂಡಿರುವ ಈ ಬೃಹತ್ ಒಕ್ಕೂಟವು ಉದ್ಯೋಗ ಮತ್ತು ಹುಟ್ಟನ್ನು ಆಧರಿಸಿದ ಜಾತಿ ಭಿನ್ನ ಭೇದಗಳನ್ನು ಮಾನವ ಹಕ್ಕುಗಳ ಉಲ್ಲಂಘನೆ ಮತ್ತು ಅಭಿವೃದ್ಧಿಗೆ ಮಾರಕವೆಂದು ಒಪ್ಪಿದೆ. ಈ ನಿರ್ಣಯ ಭಾರತೀಯರಿಗೆ ಯಾಕೆ ಮುಖ್ಯವೆಂದರೆ, ಇಲ್ಲಿಯವರೆವಿಗೂ ಭಾರತ ಸರ್ಕಾರ ಜಾತಿಯು 'not an element of race' ಆಗಿರುವುದರಿಂದ ಕುಲ ಭೇದಗಳ ಅಡಿ ಬರುವ ಕಾನೂನಿನ ವ್ಯಾಪ್ತಿಯಿಂದ ಹೊರಗಿದೆ ಎಂದೇ ವಾದಿಸುತ್ತಿತ್ತು. ವ್ಯಂಗ್ಯವೇನೆಂದರೆ ಈ ನಿರ್ಣಯ ಅಂಗೀಕಾರವಾಗಿರುವ ಇದೇ ದಿನ (ಅಕ್ಟೋಬರ್ 10, 2013) ಪಾಟ್ನ ಉಚ್ಚ ನ್ಯಾಯಾಲಯವು ಲಕ್ಷ್ಮಣಪುರ-ಬಾಥೆ ಹೇಯ ಕೃತ್ಯದಲ್ಲಿ ಭಾಗಿಯಾದ 26 ಆರೋಪಿಗಳನ್ನು ಖುಲಾಸೆ ಗೊಳಿಸಿದೆ. ಈ ಪ್ರಕರಣದಲ್ಲಿ 100 ಜನರ ಪ್ರಬಲ ಜಾತಿಯ ಗುಂಪೊಂದು 58 ದಲಿತರನ್ನು ಕ್ರೂರವಾಗಿ ಕೊಚ್ಚಿ ಕೊಂದಿದ್ದರು. ಕಾರಣ ತೀರಾ ಸರಳ, ಪ್ರತಿ ತಿಂಗಳು ತಮ್ಮ ವೇತನವನ್ನು ಧಾನ್ಯ ರೂಪದಲ್ಲಿ ಪಡೆಯುತ್ತಿದ್ದ ದಲಿತರು ಅಂದು ತಮ್ಮ ಪಗಾರವನ್ನು ಸ್ವಲ್ಪ ಹೆಚ್ಚು ಮಾಡುವಂತೆ ಕೇಳಿಕೊಂಡಿದ್ದರು ಅಷ್ಟೇ. 1997 ರಷ್ಟು ಹಿಂದೆ ನಡೆದ ಈ ಜಾತಿ ಆಧಾರಿತ ಹಿಂಸೆಯು ಆರೋಪಿಗಳಿಗೆ ಯಾವುದೇ ಶಿಕ್ಷೆಯಾಗದೆ 2013ರಲ್ಲಿ ಮುಗಿದಿದೆ.

ಕೃಪೆ : 'ದಿ ಹಿಂದು' ನವೆಂಬರ್ 5, 2013

ಸಾಹಿತ್ಯವು ಯಾವಾಗಲೂ ಸಮಾಜ ಮತ್ತು ಅದರ ಸಮಸ್ಯೆಗಳ ಬಗ್ಗೆ ಹೇಳಲು ಪ್ರಯತ್ನಿಸುತ್ತಿರುತ್ತದೆ. ಪ್ರಾಚೀನ ಗ್ರೀಕ್‌ರ ಪ್ರಕಾರ ಸಾಹಿತ್ಯವು ನಮ್ಮ ಜೀವಾತ್ಮಗಳಿಗೆ ಹಾದಿತೋರುತ್ತಿರುತ್ತದೆ. ಪಾಕೀಸ್ತಾನದ ಉದಯೋನ್ಮುಖ ಲೇಖಕಿ ಫಾತಿಮಾ ಭುಟ್ಟೊ ತನ್ನ ಇತ್ತೀಚಿನ ಕಾದಂಬರಿ 'The Shadow of the Crescent Moon' ಕೃತಿಯಲ್ಲಿ ಭಯೋತ್ಪಾಧನೆ, ಧಾರ್ಮಿಕ ಸಂಘರ್ಷಗಳನ್ನು ಪಾಕಿಸ್ತಾನದ ಮಹಿಳೆಯರು ಎದುರಿಸುತ್ತಿರುವ ಬಗೆಯನ್ನು ವಿವರಿಸುತ್ತಾ "ದಕ್ಷಿಣ ಏಷಿಯಾದ ಈ ಭಾಗಗಳಲ್ಲಿ ಸೆಕ್ಯುಲಾರಿಸಂ ಎನ್ನುವುದು ಪಶ್ಚಿಮದ ಜನ ಅರ್ಥ ಮಾಡಿಕೊಂಡಂತೆ ಇಲ್ಲ. ಧರ್ಮ ಎಂದರೆ ಪಾಶ್ಚಾತ್ಯರಿಗೆ ಭಯ. ಜನರ ಜೀವನಗಳಲ್ಲಿ ಹಾಸುಹೊಕ್ಕಾಗಿರುವ ಧರ್ಮವೆಂದರೆ ಅವರಿಗೆ ಅಲರ್ಜಿ. ಆದರೆ ನನ್ನ ಮಟ್ಟಿಗೆ ಈ ಭಾಗದ ಜನರಲ್ಲಿ ನಿಜವಾದ ಜಾತ್ಯಾತೀತತೆ ಎಂದರೆ ತಾಳ್ಮೆ ಮಾತ್ರ".

ತೀವ್ರ ತರನಾದ ಕ್ರೌರ್ಯಗಳ ಬಗ್ಗೆ ತಿಳಿದಾಗ ಅಸಹಾಯಕರು ಮಾತ್ರವೇ ತಾಳ್ಮೆಯಿಂದ ಇರುತ್ತಾರೆ ಎಂದೆನಿಸದಿರಲಾರದು. ಮಾನವ ಸಂಬಂಧಗಳನ್ನು ಆಧರಿಸಿದ ಹಿಂಸೆಗಳನ್ನು ಹೇಗೆ ನಿಭಾಯಿಸಬೇಕೆಂಬುದನ್ನು ಸಾಹಿತ್ಯ ಮಾತ್ರವೇ ಕಲಿಸುತ್ತದೆ. ಆದರೆ ಅದಕ್ಕೆ ಒಪ್ಪಿಸಿಕೊಳ್ಳುವ ಮನಃಸ್ಥಿತಿ ಬೇಕಷ್ಟೆ. ಜಾತಿ ಹಿಂಸೆಯ ಕ್ರೌರ್ಯ ಮನಸ್ಸುಗಳನ್ನು ತಲ್ಲಣಗೊಳಿಸಬೇಕಿದೆ.

ವಂದನೆಗಳು

– ಸಂಪಾದಕ





| ಪರಿಚಯ | 'ಹೆಣ್ಣು ಮತ್ತು ಸಂಸ್ಕೃತಿ'ಗೆ ಸಂಬಂಧಿಸಿದ ಸ್ತ್ರೀವಾದಿ ಸಂಸ್ಕೃತಿ ಚಿಂತನೆಗಳ ವಿಶ್ಲೇಷಣೆ |
|---|---|

("ಸಂಸ್ಕೃತಿ ಅಧ್ಯಯನದಲ್ಲಿ 'ಸಂಸ್ಕೃತಿ'ಯ ಮರುಚಿಂತನೆ": ಪೂರ್ವದ ಓದು - ಪ್ರಸ್ತುತದ ಅರ್ಥೈಸಿಕೊಳ್ಳುವಿಕೆ - ಭವಿಷ್ಯದ ಚಿಂತನೆ ಮಾಲಿಕೆಯ ಐದನೆಯ ಭಾಗ)

ಸಾಮಾನ್ಯವಾಗಿ ನಾವು ಹೆಣ್ಣು ಮತ್ತು ಸಂಸ್ಕೃತಿಯ ಬಗ್ಗೆ ಮಾತನಾಡಲು ಹೊರಟರೆ, ಅಲ್ಲಿ ಸ್ತ್ರೀವಾದಿ ಚಿಂತನೆಯನ್ನು ಬಿಟ್ಟು ಮಾತನಾಡುವುದು ಕಷ್ಟ. ಏಕೆಂದರೆ, ಸ್ತ್ರೀವಾದಿ ಚಳವಳಿಯನ್ನು ಅನೇಕ ಚಿಂತಕರು ಸಾಮಾಜಿಕ-ರಾಜಕೀಯ ಚಳವಳಿ ಎಂಬುದಕ್ಕಿಂತಲೂ ಹೆಚ್ಚಾಗಿ ಸಾಂಸ್ಕೃತಿಕ ಚಳವಳಿಯನ್ನಾಗಿ ನೋಡಿದ್ದಾರೆ; ಅರ್ಥೈಸಿದ್ದಾರೆ. ಅದರಲ್ಲೂ ಮುಖ್ಯವಾಗಿ ಸಮಕಾಲೀನ gender ಸಿದ್ಧಾಂತದ ಬಗ್ಗೆ ಮಾತನಾಡುವ ಬಹುತೇಕ ಸ್ತ್ರೀವಾದಿ ಸಂಸ್ಕೃತಿ ಚಿಂತಕರು "ಸಂಸ್ಕೃತಿಯೊಂದಿಗಿನ ಹೆಣ್ಣಿನ ಸಂಬಂಧ ಎಂತಹುದು?" ಮತ್ತು "ಹೆಣ್ಣು ಹೇಗೆ ಸಂಸ್ಕೃತಿ ಮತ್ತು ಸಾಂಸ್ಕೃತಿಕ ಸಿದ್ಧಾಂತಗಳನ್ನು ಅರ್ಥೈಸಿಕೊಳ್ಳುತ್ತಾಳೆ?" ಎಂಬುದರ ಬಗ್ಗೆಯೇ ಚಿಂತನೆ ಮಾಡಿದ್ದಾರೆ. ಇದರಲ್ಲಿ ಅವರು ಮುಖ್ಯವಾಗಿ ಚರ್ಚಿಸಿರುವ ಅಂಶಗಳು: "ಸಂಸ್ಕೃತಿ ಹೇಗೆ ರೂಪುಗೊಳ್ಳುತ್ತದೆ ಅಥವಾ ಉತ್ಪಾದಿಸಲ್ಪಡುತ್ತದೆ?" ಮತ್ತು "ಸಂಸ್ಕೃತಿ ಏನನ್ನೆಲ್ಲಾ ಒಳಗೊಂಡಿರುತ್ತದೆ ಅಥವಾ ಸೇರಿಸಿಕೊಂಡಿರುತ್ತದೆ?"..... ಇತ್ಯಾದಿ.




ಪಾಪ್ಯುಲರ್ ಅಥವಾ ಮಾಸ್ ಸಂಸ್ಕೃತಿ ಎಂದು ಕರೆಸಿಕೊಳ್ಳುವ ಆಧುನಿಕ ಸಂಸ್ಕೃತಿಯು ಹೇಗೆ ಬಂಡವಾಳಶಾಹಿ ವ್ಯವಸ್ಥೆಯಿಂದ ಪ್ರಭಾವಿಸಲ್ಪಟ್ಟಿದೆ ಎಂಬುದನ್ನು ಈ ಹಿಂದಿನ ಸಂಚಿಕೆಗಳಲ್ಲಿ ನಾವೀಗಾಗಲೇ ಚರ್ಚಿಸಿದ್ದೇವೆ. ಸ್ತ್ರೀವಾದಿ ಚಿಂತಕರೂ ತಮ್ಮ ಸಂಸ್ಕೃತಿ ವಿಮರ್ಶೆಯಲ್ಲಿ ಚರ್ಚಿಸಿರುವುದು ಇದನ್ನೇ. ಸಿನೆಮಾ, ಜಾಹೀರಾತು, ದೂರದರ್ಶನ..... ಮುಂತಾದ ಆಧುನಿಕ ಜನಪ್ರಿಯ ಸಂಸ್ಕೃತಿ ಮಾಧ್ಯಮಗಳ ಮೇಲೆ ಮಾಡಿದ ಅಧ್ಯಯನಗಳ ಆಧಾರದ ಮೇಲೆ ಈ ಚಿಂತಕರು ಬಂಡವಾಳಶಾಹಿ ಉತ್ಪಾದನೆಯ ಪ್ರಭಾವ ಹೊಂದಿದ ಈ ಆಧುನಿಕ ದೃಶ್ಯ ಮಾಧ್ಯಮಗಳಲ್ಲಿ ಸ್ತ್ರೀಯರನ್ನು ಬಿಂಬಿಸಿರುವ ರೀತಿಯ ವಿರುದ್ಧ ಧ್ವನಿ ಎತ್ತಿದ್ದಾರೆ. ಅವರ ಪ್ರಕಾರ, ಈ ಮಾಧ್ಯಮಗಳು ಸ್ತ್ರೀಯರ ದೈಹಿಕ (ಲೈಂಗಿಕ) appearance ಗಳನ್ನು highlight ಮಾಡುವ ಮೂಲಕ ಅವರನ್ನು ಕೇವಲ ಲೈಂಗಿಕ ವಸ್ತುಗಳನ್ನಾಗಿ(object of sex) ಬಿಂಬಿಸುತ್ತಿರುವುದನ್ನು ಕಟುವಾಗಿ ವಿರೋಧಿಸುತ್ತಾ ಬಂದಿದ್ದಾರೆ. ಕಾರ್ಲ್ ಮಾರ್ಕ್ಸ್ "ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಉತ್ಪಾದನೆಯಾದ ವಸ್ತು ಹೇಗೆ ಮಾರಾಟವಾಗುತ್ತದೆ" ಎಂದು ಹೇಳಿದನೊ ಹಾಗೆಯೇ ರೊಸ್‌ಮೆರಿ ಪ್ರಿಂಜಲ್ ಎಂಬ ಸ್ತ್ರೀವಾದಿ ಚಿಂತಕಿ "ಆಧುನಿಕ ಸಂಸ್ಕೃತಿ ಮಾಧ್ಯಮಗಳಲ್ಲೂ ಹೆಣ್ಣನ್ನು ಮಾರಾಟಕ್ಕಿರುವ ವಸ್ತುವೆಂಬಂತೆ ಬಿಂಬಿಸಲಾಗುತ್ತಿದೆ" ಎಂದು ಟೀಕಿಸಿದ್ದಾರೆ. ಇದೇ ರೀತಿ ಸಾಂಸ್ಕೃತಿಕ ಉತ್ಪನ್ನಗಳ ಉತ್ಪಾದನೆಯಲ್ಲಿ ಸ್ತ್ರೀಯರನ್ನು ಬಿಂಬಿಸಿರುವುದರ ಹಾಗೂ ಇದಕ್ಕೆ ಸ್ತ್ರೀಯರ ಪ್ರತಿಕ್ರಿಯೆಯನ್ನು ಕುರಿತ ಚಿಂತನೆಗಳು ಬೆಟಿ ಫ್ರೀಡನ್, ಜೇನಿಸ್ ರಾಡವೇ, ಸೆಲಿಯಾ ಲ್ಯೂರಿ..... ಮುಂತಾದ ಸಂಸ್ಕೃತಿ ಮತ್ತು ಸ್ತ್ರೀವಾದಿ ಚಿಂತಕರಿಂದ ಬಂದಿವೆ. ಇಂದಿನ ಸಂಚಿಕೆಯಲ್ಲಿ ಈ ಚಿಂತನೆಗಳ ಕುರಿತಾದ ವಿಶ್ಲೇಷಣೆ:

**ಬೆಟಿ ಫ್ರೀಡನ್ ಅವರ 'Sexual Cell'**

ಬೆಟಿ ಫ್ರೀಡನ್ 'ಅಮೇರಿಕದ ಮಾಸ್ ಸಂಸ್ಕೃತಿಯಲ್ಲಿ ಸ್ತ್ರೀಯರ' ಬಗ್ಗೆ ಮಾಡಿದ ಅಧ್ಯಯನದಲ್ಲಿ ತಾನು ಕಂಡುಕೊಂಡ ಅಂಶಗಳನ್ನು ತನ್ನ ಕೃತಿ "Feminine Mystic" (1963)ನ ಐದನೆ ಅಧ್ಯಾಯ "Sexual Cell" ನಲ್ಲಿ ದಾಖಲಿಸಿದ್ದಾರೆ. ಮಾಸ್ ಮೀಡಿಯಾದಲ್ಲಿ ಅದರಲ್ಲೂ ಮುಖ್ಯವಾಗಿ ಜಾಹೀರಾತು ಮಾಧ್ಯಮದಲ್ಲಿ ಸ್ತ್ರೀಯರಿಗೆ ಕೇವಲ ಗೃಹಿಣಿಯ ಪಾತ್ರವನ್ನು ಅಂದರೆ ಗೃಹಕೃತ್ಯಗಳನ್ನು ನಿರ್ವಹಿಸುವ, ಮಕ್ಕಳನ್ನು ಹೆರುವ-ಸಾಕುವ ಮತ್ತು ಗಂಡಂದಿರನ್ನು ಸಂತೋಷಪಡಿಸುವ ಪಾತ್ರಗಳನ್ನು ಮಾತ್ರ ಆರೋಪಿಸಿರುವುದನ್ನು ಫ್ರೀಡನ್ ವಿರೋಧಿಸುತ್ತಾರೆ.

ಫ್ರೀಡನ್ ತಮ್ಮ ಸಮೀಕ್ಷೆಯಲ್ಲಿ "ಸಂಪೂರ್ಣ ವಾಗಿ ಗೃಹಕೃತ್ಯದಲ್ಲಿ ತೊಡಗಿಸಿ ಕೊಂಡಿರುವ ಸ್ತ್ರೀ". "ಹೊರಗೆ ಕೆಲಸ ಮಾಡಿ ಗೃಹಕೃತ್ಯಗಳನ್ನೂ ನಿರ್ವಹಿಸುವ ಸ್ತ್ರೀ" ಮತ್ತು ಸಂಪೂರ್ಣವಾಗಿ ಹೊರಗೆ ಕೆಲಸ ಮಾಡುವ ಉದ್ಯೋಗಿ ಸ್ತ್ರೀ" ಎಂಬ ಮೂರು ವರ್ಗದ ಸ್ತ್ರೀಯರನ್ನು ಬಳಸಿಕೊಂಡು ತಾವು ಕಂಡುಕೊಂಡ ಅಂಶಗಳ ಆಧಾರದ ಮೇಲೆ "ಏಕೆ ಈ ಆಧುನಿಕ ಮಾಸ್ ಮಾಧ್ಯಮ ಗಳಲ್ಲಿ ಕೇವಲ ಸ್ತ್ರೀಯರನ್ನೇ ಅದರಲ್ಲೂ ಗೃಹಿಣಿಯರನ್ನೇ (ಅನೇಕ ಸ್ತ್ರೀಯರು ಪುರುಷರಿಗೆ ಸಮಾನವಾಗಿ ಸ್ವತಂತ್ರ ವಾಗಿ ಬದುಕುತ್ತಿದ್ದರೂ) target ಮಾಡಲಾಗು ತ್ತಿದೆ?" ಎಂದು ಪ್ರಶ್ನಿಸುತ್ತಾರೆ. ಅಮೆರಿಕಾದ ಬಂಡವಾಳಶಾಹಿ ವ್ಯವಸ್ಥೆಯ ಈ ಲಿಂಗ ತಾರತಮ್ಯವನ್ನು ಖಂಡಿಸುತ್ತಾರೆ.


ಜೇನೀಸ್ ರಾಡವೇ

ಫ್ರೀಡನ್‌ರಂತೆಯೇ ಹಲವು ಅಧ್ಯಯನ ಗಳನ್ನು ಮಾಡಿದ ಇತರೆ ಚಿಂತಕರು "ಬಂಡವಾಳಶಾಹಿ ವ್ಯವಸ್ಥೆಯಲ್ಲಿ ಆರ್ಥಿಕ ವ್ಯವಸ್ಥೆ ಮತ್ತು ಸಾಂಸ್ಕೃತಿಕ ಮೌಲ್ಯಗಳ ನಡುವೆ ಸಂಬಂಧವಿರುವುದರಿಂದ ಮತ್ತು ಸಾಂಸ್ಕೃತಿಕ ಉತ್ಪನ್ನಗಳ ಉತ್ಪಾದನೆಯನ್ನು ಆರ್ಥಿಕ ಮೌಲ್ಯ ಪ್ರೋತ್ಸಾಹಿಸುವುದರಿಂದ (ಹಣವೇ ಮುಖ್ಯವಾಗುವುದರಿಂದ) ಮತ್ತು ಅಲ್ಲಿ ಸ್ತ್ರೀಯರನ್ನು ಕೆಟ್ಟದಾಗಿ ಬಿಂಬಿಸುವುದರ ಬಗ್ಗೆ ಯಾರೂ ಚಿಂತಿಸದಿರುವುದರಿಂದ ಲಿಂಗತಾರತಮ್ಯ ಹೆಚ್ಚುವುದು ಸಹಜವಾಗುತ್ತದೆ" ಎಂಬ ಕಳವಳವನ್ನು ವ್ಯಕ್ತಪಡಿಸುತ್ತಾರೆ.

ಆಧುನಿಕ ಮಾಸ್ ಮೀಡಿಯಾದಲ್ಲಿ ಸ್ತ್ರೀಯರನ್ನು ಈ ರೀತಿ ಬಿಂಬಿಸುವ ಮೂಲಕ ಸ್ತ್ರೀಯರ ಅಸ್ಮಿತೆಯನ್ನು ಕಸಿದುಕೊಳ್ಳುವ ಪ್ರಯತ್ನ ಮಾಡಲಾ ಗುತ್ತಿದೆ ಮತ್ತು ಈ ಮೂಲಕ masculinity ಗೆ ಹೆಚ್ಚು ಬಲ ತುಂಬಲಾಗುತ್ತಿದೆ. ಇದಕ್ಕೆಲ್ಲ ಮುಖ್ಯ ಕಾರಣ ಈ ಅನುಭೋಗಿ ಸಂಸ್ಕೃತಿ ಪಿತೃಪ್ರಧಾನ ವ್ಯವಸ್ಥೆಯ ಆಧಾರದ ಮೇಲೆ ಅಸ್ತಿತ್ವದಲ್ಲಿರುವುದು. ಈ ಕಾರಣದಿಂದಾಗಿಯೇ ಸ್ತ್ರೀಯರ ಅಸ್ಮಿತೆಗೆ ಕೇವಲ domestic object ಗಳೆಂಬ stereotype ಗಳನ್ನು ಆರೋಪಿಸಿರುವುದು. ಇದು ಬೆಟಿ ಫ್ರೈಡನ್ ಮಾಡುವ ವಾದ.

**ಜೇನಿಸ್‌ರಾಡವೇಅವರ *"Reading the Romance"***

ಸಂಸ್ಕೃತಿಯೊಂದಿಗಿನ ಹೆಣ್ಣಿನ ಸಂಬಂಧವನ್ನು ಕುರಿತು ಮಾತನಾಡಿದ ಸ್ತ್ರೀವಾದಿಗಳಲ್ಲಿ ಜೇನಿಸ್ ರಾಡವೇ ಅವರೂ ಒಬ್ಬರು. ತಮ್ಮ Reading the Romance ಕೃತಿಯಲ್ಲಿ ಸ್ತ್ರೀಯರು ಹೇಗೆ ಮಾಸ್ ಸಂಸ್ಕೃತಿಯ ಅನುಭೋಗಿಗಳಾಗುತ್ತಾರೆ ಎಂಬುದನ್ನು ರಾಡವೇ ವಿವರಿಸಿದ್ದಾರೆ. ಪಾಪ್ಯುಲರ್ ಸಂಸ್ಕೃತಿಯ ಬಹುಮುಖ್ಯ ಉತ್ಪನ್ನಗಳಲ್ಲೊಂದಾದ romantic fiction ಮತ್ತು ಅವುಗಳ ಓದುಗರ (readership) ನಡುವಿನ ಸಂಬಂಧದ ಬಗ್ಗೆ ಪ್ರಸ್ತಾಪಿಸುತ್ತ ಹೇಗೆ ಅವುಗಳು ಸ್ತ್ರೀಯರನ್ನು ಆಕರ್ಷಿಸಿ ತಮ್ಮ ಸಕ್ರಿಯ ಓದುಗರನ್ನಾಗಿಸುತ್ತವೆ ಎಂಬುದನ್ನು ವಿವರಿಸಿದ್ದಾರೆ. ಇದಕ್ಕಾಗಿ ಜೇನಿಸ್ ರಾಡವೇ, 1979 ರಲ್ಲಿ ಮಧ್ಯ ಪಶ್ಚಿಮ ಅಮೆರಿಕಾದ ಸ್ಮಿತ್‌ಟನ್ ಎಂಬ ಸಣ್ಣ ಪಟ್ಟಣವೊಂದರಲ್ಲಿ 41 ಸ್ತ್ರೀಯರ ಮೇಲೆ ಪ್ರಶ್ನಾವಳಿಯೊಂದರ ಮೂಲಕ ಸಮೀಕ್ಷೆಯೊಂದನ್ನು ಮಾಡುತ್ತಾರೆ. ಆ ಸ್ತ್ರೀಯರಲ್ಲಿ ಬಹುತೇಕರು ಗೃಹಿಣಿಯರು ಮತ್ತು ಉಳಿದ ಕೆಲವರು ಮಾತ್ರ ಅರೆಕಾಲಿಕ ಉದ್ಯೋಗಿ ಗೃಹಿಣಿಯರು. ಈ ಪ್ರಶ್ನಾವಳಿಗೆ ಅವರು ನೀಡಿದ ಪ್ರತಿಕ್ರಿಯೆಗಳ ಪ್ರಕಾರ ಅವರೆಲ್ಲರೂ ರೊಮ್ಯಾಂಟಿಕ್ ಫಿಕ್ಷನ್‌ಗಳನ್ನು ಓದಲು ಆರಂಭಿಸಿದ್ದು ಸುಮಾರು ತಮ್ಮ 10 ರಿಂದ 18 ನೇ ವಯಸ್ಸಿನಲ್ಲಿ ಮತ್ತು ಸುಮಾರು 45 ರಿಂದ 50 ವರ್ಷಗಳ ವರೆಗೂ ಅವುಗಳನ್ನು ಓದುವ ಆಸಕ್ತಿ ವ್ಯಕ್ತಪಡಿಸಿದರು. ಮದುವೆಯಾದ ಮೇಲೆ ಸಂಸಾರ ನಿರ್ವಹಣೆ, ಗಂಡ-ಮಕ್ಕಳ ಪಾಲನೆ, ಇತ್ಯಾದಿ ಕೆಲಸಗಳ ನಡುವೆಯೂ ಅವರು ವಾರಕ್ಕೆ ಕನಿಷ್ಟ 16 ಗಂಟೆಗಳ ಕಾಲ ಈ ರೊಮ್ಯಾಂಟಿಕ್ ಫಿಕ್ಷನ್‌ಗಳನ್ನು ಓದಲು ಪ್ರಯತ್ನಿಸುತ್ತಿದ್ದರಂತೆ. ಜೊತೆಗೆ ಅವುಗಳನ್ನು ನಿರಂತರವಾಗಿ ಓದುವ ಆಸಕ್ತಿಯನ್ನೂ ವ್ಯಕ್ತಪಡಿಸಿದರು.

ತಮ್ಮ ಸಮೀಕ್ಷೆಯಲ್ಲಿ ಕಂಡುಬಂದ ಅಂಶಗಳನ್ನು ರಾಡವೇ ಎರಡು ಮುಖ್ಯ ನೆಲೆಗಳಲ್ಲಿ ವಿಶ್ಲೇಷಿಸಿದ್ದಾರೆ. ಒಂದನೆಯದು, ಈ ಓದುಗ ಸ್ತ್ರೀಯರ ಸನ್ನಿವೇಶ ಮತ್ತು ಅವರು ಓದುವ ಕೃತಿಗಳಲ್ಲಿನ ಸನ್ನಿವೇಶಗಳಿಗಿರುವ ಸಾಮ್ಯತೆಯ ನೆಲೆ ಮತ್ತು ಎರಡನೆಯದು, ಈ ಸನ್ನಿವೇಶಗಳಲ್ಲಿ ಅವರು ಅವುಗಳನ್ನು ಓದುವ, ಅರ್ಥೈಸುವ ಪ್ರಕ್ರಿಯೆಯ ನೆಲೆ.

ಉದಾಹರಣೆಗೆ, ಈ ಕೃತಿಗಳಲ್ಲಿ ಸ್ತ್ರೀಯರು ಮನೆಗಳಲ್ಲಿಯೇ ಉಳಿದು ತಮ್ಮ ಗಂಡಂದಿರು ಮನೆಯ ಹೊರಗೆ ದುಡಿಯಲು ಹೋದಾಗ ತಾವು ದೈಹಿಕವಾಗಿ ಗಂಡಸರಿಗಿಂತ ಅಬಲೆಯರು ಎಂಬ ಭಾವ ಬಂದರೂ ಮಾನಸಿಕವಾಗಿ, ನೈತಿಕವಾಗಿ ತಾವೇ ಪುರುಷರಿಗಿಂತ ಶ್ರೇಷ್ಠರೆಂಬ ಭಾವನೆಯೂ ಅವರಲ್ಲಿ ಮೂಡುತ್ತದೆ. ಈ ತರಹದ escapism ನಲ್ಲಾದರೂ ಅವರು ತಮ್ಮ ನೈಜ ಜೀವನದಲ್ಲಿ ಬಯಸುವ ಸ್ವಾತಂತ್ರ್ಯ, ಸಮಾನತೆಗಳನ್ನು ಅನುಭವಿಸುತ್ತಾರೆ.

ರಾಡವೇ ಪ್ರಕಾರ, ಈ ರೊಮ್ಯಾಂಟಿಕ್ ಫಿಕ್ಷನ್‌ಗಳಿಗೆ 50%ಗಿಂತಲೂ ಹೆಚ್ಚು ಗೃಹಿಣಿಯರೇ ಓದುಗರಾಗಿರುವುದಕ್ಕೆ ಕಾರಣ ಅವುಗಳಲ್ಲಿ ಬಿಂಬಿಸಲಾಗಿರುವ ಪ್ರೀತಿ, ಸಂಸಾರದಂತಹ ವಿಷಯಗಳು ಮತ್ತು ಆ ವಿಷಯಗಳು ಈ ಸ್ತ್ರೀಯರ ಜೀವನದ ಘಟನೆಗಳೊಂದಿಗೆ ಸಾಮ್ಯತೆ ಹೊಂದಿರುವುದು. ಅಂದರೆ, ಸಾಮಾನ್ಯವಾಗಿ ಅವುಗಳಲ್ಲಿರುವ ಪ್ರೇಮಕಥೆ, ಆ ಕಥೆಯಲ್ಲಿ ಬರುವ ಗಂಡು ಮತ್ತು ಹೆಣ್ಣಿನ ಸಂಕಲ್ಪಗಳ ಮತ್ತು ಇಷ್ಟ-ಕಷ್ಟಗಳ ನಡುವಿನ ಸ್ಪರ್ಧೆ, ನಡುವೆ ಎದುರಾಗುವ ಅಡೆ-ತಡೆಗಳು, ಪ್ರೀತಿ, ಜಗಳ, ಸಂಸಾರ..... ಇತ್ಯಾದಿ ಅಂಶಗಳು ತಮ್ಮ ಜೀವನದಲ್ಲೂ ಎದುರಾಗುವುದರಿಂದ ಅವರು ಅವುಗಳನ್ನು ಹೆಚ್ಚು ಇಷ್ಟಪಟ್ಟು ಓದುತ್ತಾರೆ.

ರಾಡವೇ "ಅದು ಕೇವಲ ಗೃಹಿಣಿಯರು ತಮ್ಮ ದಿನನಿತ್ಯದ ನೋವುಗಳಿಂದ escape ಆಗುವುದಕ್ಕೆ ಮಾಡುವ ಪ್ರಯತ್ನವಾದರೂ, ಅದು ತಮ್ಮ ಬದುಕಿನ ನೈಜತೆಗೆ ಮತ್ತು ಅದಕ್ಕೆ ಕಾರಣವಾದ ಸಮಾಜದ ನೀತಿ-ನಿಯಮಗಳಿಗೆ ಅವರು ತೋರುವ ವಿರೋಧವೂ ಹೌದು" ಎಂದು ಹೇಳುತ್ತಾರೆ. ಅವರ ಪ್ರಕಾರ, ಈ ರೀತಿಯ ವಿರೋಧಗಳ ಮೂಲಕ ಅವರು ತಾವು ಅಪೇಕ್ಷಿಸುವ ಪ್ರೀತಿ ತುಂಬಿದ ಲೋಕವನ್ನು ಕಟ್ಟಿಕಳ್ಳುತ್ತಾರೆ. ಅಲ್ಲಿ ಸಾಂಸ್ಕೃತಿಕವಾಗಿ, ಸಾಮಾಜಿಕವಾಗಿ ತಮ್ಮನ್ನು ಕಡೆಗಣಿಸಿರುವುದನ್ನು ಪ್ರತಿಭಟಿಸುತ್ತಾರೆ. ಹೀಗಾಗಿ ಅವರಲ್ಲಿ ತಮ್ಮ ನೈಜ ಸ್ಥಾನದ ಬಗ್ಗೆ ಜಾಗೃತಿ ಮೂಡುತ್ತದೆ.


ಸೆಲಿಯಾ ಲ್ಯೂರಿ

ಜೇನಿಸ್ ರಾಡವೇ "ರೊಮ್ಯಾಂಟಿಕ್ ಫಿಕ್ಷನ್‌ಗಳು ಸಂಸ್ಕೃತಿಯನ್ನು ಮಾತ್ರವಲ್ಲದೆ ಅವುಗಳ ಅನುಭೋಗಿಗಳನ್ನೂ (ಓದುಗರನ್ನೂ) ಋಣಾತ್ಮಕವಾಗಿ evaluate ಮಾಡುತ್ತವೆ" ಎಂದು ಟೀಕಿಸಿದರೂ, "ಆ ಓದುಗ ಸ್ತ್ರೀಯರು ಈ devaluation ಗಳ ವಿರುದ್ಧ ಸಮಾಜದ ಹಾಗೂ ಸಂಸ್ಕೃತಿಯ ಮಟ್ಟದಲ್ಲಿ ಧ್ವನಿಎತ್ತುವ ಪ್ರಯತ್ನ ಮಾಡುತ್ತಾರೆ" ಎಂದು ವಿಶ್ಲೇಷಿಸುತ್ತಾರೆ. ರಾಡವೇಯಂತಹ ಇತರೆ ಸ್ತ್ರೀವಾದಿ ಮತ್ತು ಸಂಸ್ಕೃತಿ ಚಿಂತಕರ ಪ್ರಕಾರ, ಈ ರೊಮ್ಯಾಂಟಿಕ್ ಕಥನಗಳಲ್ಲಿ ಗಂಡನ್ನು ಗಂಡಸನ್ನಾಗಿಯೂ (masculine) ಮತ್ತು ಹೆಣ್ಣನ್ನು ಹೆಂಗಸನ್ನಾಗಿಯೂ (feminine) ಬಿಂಬಿಸಲಾಗಿರುತ್ತದೆ. ಅಷ್ಟೇ ಅಲ್ಲದೆ, ಯಾವಾಗಲೂ ಗಂಡನ್ನು ಧನಾತ್ಮಕವಾಗಿಯೂ ಹೆಣ್ಣನ್ನು ಋಣಾತ್ಮಕವಾಗಿಯೂ ಚಿತ್ರಿಸಲಾಗಿರುತ್ತದೆ. ಇಲ್ಲಿ ಹೆಣ್ಣು ಯಾವಾಗಲೂ ಅಬಲೆ, ವಿವೇಚನಾ ಶಕ್ತಿ ಇಲ್ಲದವಳು, ಗಂಡಿಗೆ ಅಡಿಯಾಳಾಗಿರುವವಳು, ಗಂಡಿನ ಲೈಂಗಿಕ ಬಯಕೆ ತೀರಿಸುವವಳು..... ಇತ್ಯಾದಿ.

ಆದರೆ, ಇಲ್ಲಿ thought provoking ಆಗಿರುವಂಥದ್ದು ಏನೂ ಇಲ್ಲ. ಆದರೆ ಅವುಗಳ ಓದುಗರು intellectualಗಳೇನೂ ಅಲ್ಲದ್ದರಿಂದ ಮತ್ತು ತಮ್ಮ ಜೀವನಕ್ಕೆ ಸಾಮ್ಯವಿರುವ ಅಂಶಗಳೇ ಅದರಲ್ಲೂ ಇರುವುದರಿಂದ ಮತ್ತು ಬಹುತೇಕ ರೊಮ್ಯಾಂಟಿಕ್ ಫಿಕ್ಷನ್‌ಗಳು ಮದುವೆ, ತಪ್ಪೊಪ್ಪಿಗೆ, ಎಲ್ಲರೂ ಒಂದಾಗುವಂತಹ ಸಂತೋಷದ ಅಂಶಗಳಿಂದಲೇ ಮುಗಿಯುವುದರಿಂದ, ತಾವೇ ಅವುಗಳ ಒಂದೊಂದು ಪಾತ್ರವಾಗುತ್ತ ಅವುಗಳನ್ನು ಓದುವ ಮೂಲಕ ತಮ್ಮ ನೋವುಗಳಿಂದ escape ಆಗಲು ಪ್ರಯತ್ನಿಸುತ್ತಾರೆ.

ಈ ಎಲ್ಲಾ ಸ್ತ್ರೀವಾದಿಗಳು ಪಾಪ್ಯುಲರ್ ಸಂಸ್ಕೃತಿಯನ್ನು ವಿರೋಧಿಸುವುದು ಇದೊಂದೇ ಕಾರಣಕ್ಕಾಗಿ. ಕೇವಲ ಗೃಹಿಣಿಯರ ನಡುವೆಯೇ ಪಾಪ್ಯಲರ್ ಆದ ಈ ರೊಮ್ಯಾಂಟಿಕ್ ಫಿಕ್ಷನ್‌ಗಳನ್ನು ಓದುವ ಸಂಸ್ಕೃತಿ ಅವರನ್ನು ಬೌದ್ಧಿಕವಾಗಿ, ಭೌತಿಕವಾಗಿ ಮತ್ತು ಮಾನಸಿಕವಾಗಿ ಕೆಳಮಟ್ಟಕ್ಕೆ ತರುತ್ತಿರುವ ಒಂದೇ ಕಾರಣಕ್ಕಾಗಿ. "ಇದರಿಂದಾಗಿಯೇ ಇವುಗಳ ಸ್ತ್ರೀ ಓದುಗರಿಗೆ ಋಣಾತ್ಮಕವಾದ ಕಳಂಕ (stigma)ಗಳನ್ನು ಅಂಟಿಸುತ್ತಿರುವುದು" ಎಂಬುದು ಈ ಚಿಂತಕರ ವಾದ.

## ಸೆಲಿಯಾ ಲ್ಯೂರಿಯವರ "The Rights and Wrongs of Culture"

ಸಂಸ್ಕೃತಿ ಸಿದ್ಧಾಂತಗಳ ಜೊತೆಗೆ ಸ್ತ್ರೀಯರ ಸಂಬಂಧವನ್ನು ಕುರಿತು ಮಾತನಾಡಿದ ಚಿಂತಕರಲ್ಲಿ ಸೆಲಿಯಾ ಲ್ಯೂರಿ ಕೂಡ ಪ್ರಮುಖರು. ಸಂಸ್ಕೃತಿ ಮತ್ತು ಸಂಸ್ಕೃತಿ ಸಿದ್ಧಾಂತದ ಮೂಲ, ಸಾಂಸ್ಕೃತಿಕ ಉತ್ಪಾದನೆ, ಸಂಸ್ಕೃತಿಯ ವ್ಯಾಖ್ಯಾನಗಳನ್ನು ವಿಶ್ಲೇಷಿಸಲು ಸಂಸ್ಕೃತಿ ಕ್ಷೇತ್ರದಲ್ಲಿ ಸ್ತ್ರೀಯರ ಪಾಲ್ಗೊಳ್ಳುವಿಕೆಯ ವಿಷಯದ ಬಗ್ಗೆ ಆಸಕ್ತಿ ತೋರಿಸಿದ ಸೆಲಿಯಾ ಲ್ಯೂರಿ ತಮ್ಮ ಸಂಸ್ಕೃತಿ ವಿಮರ್ಶೆಯಲ್ಲಿ "ಸಂಸ್ಕೃತಿ ಬಗೆಗಿನ ಪುರುಷ ಸಿದ್ಧಾಂತಿಗಳ ವಿಶ್ಲೇಷಣೆಯಲ್ಲಿ genderನ ಪ್ರಶ್ನೆಯೇ

ಎದುರಾಗುವುದಿಲ್ಲ. ಆದರೆ, ಸಂಸ್ಕೃತಿಯೊಂದಿಗಿನ ಸ್ತ್ರೀಯರ ಸಂಬಂಧ ಕೂಡ ಸಂಸ್ಕೃತಿ ಸಿದ್ಧಾಂತಗಳಲ್ಲಿ ಮುಖ್ಯವಾಗುತ್ತದೆ" ಎಂದು ವಾದಿಸಿದ್ದಾರೆ.

ಸೆಲಿಯಾ ಲ್ಯೂರಿ ಪ್ರಕಾರ, ಸಾಂಸ್ಕೃತಿಕ ಉತ್ಪಾದನೆಯಲ್ಲಿ ಪುರುಷರ ಪಾಲ್ಗೊಳ್ಳುವಿಕೆಗೂ ಮಹಿಳೆಯರ ಪಾಲ್ಗೊಳ್ಳುವಿಕೆಗೂ ಸಾಕಷ್ಟು ಅಂತರವಿದೆ. ಏಕೆಂದರೆ ಇಲ್ಲಿ ಸ್ತ್ರೀ ಪುರುಷರಿಬ್ಬರೂ ಒಂದೇ ರೀತಿಯ ಪಾಲ್ಗೊಳ್ಳುವಿಕೆಯನ್ನು ಹಂಚಿಕೊಳ್ಳುವುದಿಲ್ಲ. ಇದನ್ನು "ಲಿಂಗ ಅಸಮಾನತೆ" (Gender Asymmetry) ಎಂದು ಕರೆಯುವ ಸೆಲಿಯಾ ಲ್ಯೂರಿ ಈ ಲಿಂಗ ತಾರತಮ್ಯದಿಂದಾಗಿಯೇ ಶ್ರೇಷ್ಠವೆಂದು ಕರೆಯಲ್ಪಡುವ ಯಾವುದೇ ಸಾಂಸ್ಕೃತಿಕ ಉತ್ಪನ್ನಗಳ ಉತ್ಪಾದನೆಯಲ್ಲಿ ಸ್ತ್ರೀಯರಿಗೆ ಯಾವುದೇ ಅವಕಾಶವಾಗಲೀ ಅಧಿಕಾರವಾಗಲೀ ಇರುವುದಿಲ್ಲ.

ಹಾಗೆಂದು ಇದು ಸಂಸ್ಕೃತಿಯೊಂದರ ಶ್ರೇಷ್ಠ ಇಲ್ಲವೇ ಕೀಳು ಅಂಶಗಳ ಪ್ರಶ್ನೆಯಲ್ಲ. ಬದಲಿಗೆ ಸಾಂಸ್ಕೃತಿಕ ಉತ್ಪಾದನೆ ಕೇವಲ ಪುರುಷನ ಒಡೆತನದಲ್ಲಿರುತ್ತದೆ ಮತ್ತು ಅಲ್ಲಿಯ ಉತ್ಪನ್ನಗಳು ಪುರುಷನ ಅಭಿರುಚಿ, ಅಗತ್ಯಗಳಿಗೆ ತಕ್ಕಂತೆ ಮಾತ್ರ ಇರುತ್ತವೆ. ಜೊತೆಗೆ ಇದನ್ನು ಶ್ರೇಷ್ಠವೆಂದು ಕರೆಯುವುದು ಪುರುಷ ಮಾತ್ರ. ಹೀಗಾಗಿಯೇ ಸಾಮಾಜಿಕವಾಗಿ, ಸಾಂಸ್ಕೃತಿಕವಾಗಿ ಮತ್ತು ಇತರ ಎಲ್ಲ ಕ್ಷೇತ್ರಗಳಲ್ಲಿಯೂ ಪ್ರಬಲನಾಗಿರುವ ಪುರುಷ ತಾನು ಮಾಡಿದ್ದನ್ನು ಸಮರ್ಥಿಸಿಕೊಳ್ಳುತ್ತ ಸ್ತ್ರೀಯರ ಸಾಂಸ್ಕೃತಿಕ ಅಥವಾ ಇನ್ನಾವುದೇ ಅಭಿವ್ಯಕ್ತಿಗಳನ್ನು ಕೀಳಾಗಿ ಕಾಣುತ್ತಾನೆ; ಅರ್ಥೈಸುತ್ತಾನೆ. ಅಷ್ಟಕ್ಕೂ ಈ ಪುರುಷ ಕೇಂದ್ರಿತ ಸಂಸ್ಕೃತಿಯಲ್ಲಿ ಸ್ತ್ರೀಯರ ಪಾಲ್ಗೊಳ್ಳುವಿಕೆಗೆ ಅವಕಾಶವನ್ನೇ ನೀಡುವುದಿಲ್ಲ. ಇದನ್ನು ಮೀರಿ ಯಾವುದೇ ಸ್ತ್ರೀ ತನ್ನ ಸಾಂಸ್ಕೃತಿಕ ಅಭಿವ್ಯಕ್ತಿಗಳನ್ನು ತೋರಿದರೆ ಅದನ್ನು ಅತ್ಯಂತ 'ನಿಕೃಷ್ಟ', 'ಕೀಳು', 'ಗುಣಾತ್ಮಕವಲ್ಲದ್ದು' ಎಂದು ಪರಿಗಣಿಸಲಾಗುತ್ತದೆ ಮತ್ತು ಅಂತಹ ಸಾಂಸ್ಕೃತಿಕ ಉತ್ಪನ್ನಗಳನ್ನು masculine ಸಂಸ್ಕೃತಿಯಲ್ಲಿ ಪರಿಗಣಿಸುವುದಿಲ್ಲ. ಇದು gender asymmetry ಯ ಬಹುಮುಖ್ಯ ಲಕ್ಷಣ ಎಂದು ಸೆಲಿಯಾ ಲ್ಯೂರಿ ವಾದಿಸುತ್ತಾರೆ. ಸಾಹಿತ್ಯದಲ್ಲೂ ಸ್ತ್ರೀಯರ ಕೃತಿಗಳನ್ನು ಕೀಳಾಗಿಯೂ ಪುರುಷರ ಕೃತಿಗಳನ್ನು ಶ್ರೇಷ್ಠವೆಂದೂ ವ್ಯಾಖ್ಯಾನಿಸಲಾಗುತ್ತದೆ. ಹೀಗಾಗಿ ಸ್ತ್ರೀಯರಿಗೆ ಸಾಹಿತ್ಯದಲ್ಲೂ authorship ಸಿಗುವುದಿಲ್ಲ.

ಇದನ್ನು ತೀವ್ರವಾಗಿ ವಿರೋಧಿಸುವ ಸೆಲಿಯಾಲ್ಯೂರಿಯಂತಹ ಸ್ತ್ರೀವಾದಿ ಸಂಸ್ಕೃತಿ ಚಿಂತಕರು "ಪುರುಷ ತನ್ನ ಕೃತಿ/ಅಭಿವ್ಯಕ್ತಿಗಳಲ್ಲಿ ಎಂದಿಗೂ gender




asymmetryಯ ಈ ಶ್ರೇಣಿಗಳ ಬಗ್ಗೆ ಧ್ವನಿ ಎತ್ತುವುದಿಲ್ಲ. ಏಕೆಂದರೆ, ಯಾವಾಗಲೂ ಸಾರ್ವತ್ರಿಕ ವಾಗಿ ಹಾಗೂ ಮುಖ್ಯವಾಹಿನಿಯಲ್ಲಿ 'ಕರ್ತೃ'ವಾಗಿಯೇ (dominating 'Subject') ಉಳಿಯಬೇಕೆಂಬ patriarchal ಮನೋಭಾವದಿಂದ ಸ್ತ್ರೀಯರ ಬಗ್ಗೆ ಎಂದಿಗೂ ಚಿಂತಿಸುವುದೇ ಇಲ್ಲ. ಈ ಸಾಂಸ್ಕೃತಿಕ ತಾರತಮ್ಯಗಳಿಗೆ ಪುರುಷನಿಗಿರುವ ಸ್ತ್ರೀಯರ ಬಗೆಗಿನ ಅಂಧಕಾರವೇ ಕಾರಣವಾಗುತ್ತದೆ." ಎಂದು ವಿಶ್ಲೇಷಿಸುತ್ತಾರೆ. ಈ ಕುರುಡುತನವನ್ನು gender blindness ಎಂದು ಕರೆಯುವ ಸೆಲಿಯಾ ಲ್ಯೂರಿ "ಆದರೆ ನಿಜವಾಗಿ ಸಂಸ್ಕೃತಿ ಸಿದ್ಧಾಂತಗಳು ಯಾವತ್ತಿಗೂ gender neutral ಆಗಿರುತ್ತವೆ; ಪುರುಷ ಮಾತ್ರ ಎಂದಿಗೂ ಇದನ್ನು ಅರ್ಥ ಮಾಡಿಕೊಳ್ಳುವುದಿಲ್ಲ" ಎಂದು ವಾದಿಸುತ್ತಾರೆ.

"ಕೇವಲ ಪುರುಷನ ಪ್ರಕಾರದ ಸಂಸ್ಕೃತಿಯ 'ಸರಿ'–'ತಪ್ಪು'ಗಳನ್ನು ಸ್ತ್ರೀಯರು ಎಂದಿಗೂ enjoy ಮಾಡುವುದಿಲ್ಲ" ಎನ್ನುವ ಸೆಲಿಯಾ ಲ್ಯೂರಿ "ಪುರುಷರ ಪ್ರಕಾರ ಸ್ತ್ರೀಯರು enjoy ಮಾಡಲು ಸಂಸ್ಕೃತಿಯ ಅಂತಹ 'ಸರಿ' (rights) ಗಳನ್ನು ಹೊಂದಿರುವುದೇ ಇಲ್ಲ" ಎಂದು ವಾದಿಸುತ್ತಾರೆ. "ಯಾವುದೇ ಸಂಸ್ಕೃತಿ ಸಿದ್ಧಾಂತ valid ಆಗಬೇಕಿದ್ದರೆ ಪ್ರತಿ ಸಂಸ್ಕೃತಿ ಸಿದ್ಧಾಂತಿಯೂ ಈ 'ಜೆಂಡರ್ ಅಸಿಮೆಟ್ರಿ' ಮತ್ತು ಸಾಂಸ್ಕೃತಿಕ ಉತ್ಪಾದನೆಯ ನಡುವಿನ ಸಂಬಂಧವನ್ನು ಕುರಿತು ಚಿಂತಿಸಬೇಕು" ಎಂದು ಹೇಳುವ ಸೆಲಿಯಾ ಲ್ಯೂರಿ ಈ mainstream ಸಂಸ್ಕೃತಿಗೆ ಪರ್ಯಾಯವಾದ ಅಥವಾ ವಿರುದ್ಧವಾದ subaltern ಸಂಸ್ಕೃತಿಯ ಅವಶ್ಯಕತೆಯನ್ನು ಒತ್ತಿ ಹೇಳುತ್ತಾರೆ.

– ಸಿದ್ಧರಾಮಯ್ಯ ಡಿ.ಎಂ.
ಆಂಗ್ಲ ವಿಭಾಗ, ಸರ್ಕಾರಿ ಪದವಿ ಕಾಲೇಜು,
ತಿಪಟೂರು
kalpasahyadri@gmail.com



# ವ್ಯಕ್ತಿ : ಶುದ್ಧತೆ / ಬದ್ಧತೆ

ಇಪ್ಪತ್ತನೇ ಶತಮಾನದ ಎರಡು ಮಹತ್ವದ ಆವಿಷ್ಕಾರಗಳು: ಅಣು ಬಾಂಬ್ ಮತ್ತು ಗಾಂಧಿಯಿಸಮ್. ಬುದ್ಧ ಮತ್ತು ಗಾಂಧಿ ಹೇಳಿದ್ದು, "ಸತ್ಯದ ನಮ್ಮ ಗುರಿ ಎಷ್ಟು ಮುಖ್ಯವೋ ಅದನ್ನು ಪಡೆಯುವ ಮಾರ್ಗವೂ ಅಷ್ಟೇ ಮುಖ್ಯ. ಮಾರ್ಗದ ಶುದ್ಧತೆ ಗುರಿಯ ಸಫಲತೆಗೆ ಕಾರಣ." ಈ ಮಾರ್ಗದಲ್ಲಿ ಸಾಗಲು ಇರುವ ತೊಡಕುಗಳೇನು. ಆಗಿಹೋದ ಎಲ್ಲಾ ಇಸಂ ಗಳಿಗಿಂತ ಇಂದು ಉಪಯೋಗವಾದ (Utilitarianism) ಪ್ರಮುಖವಾಗುತ್ತಿದೆ. ಬಂಡವಾಳಶಾಹಿ, ಬಹುರಾಷ್ಟ್ರ ಕಂಪನಿಗಳು, ಭ್ರಷ್ಟರು, ರಾಜಕಾರಣಿಗಳು, ಅಧಿಕಾರಿಗಳು ಇತ್ಯಾದಿ ಪ್ರತಿಯೊಬ್ಬರೂ ತಮಗೇನು ಉಪಯೋಗ ಎಂದು ತುಡಿಯುತ್ತಾರೆ. ಈ ಎಲ್ಲಾ ಗೋಳಾಟಕ್ಕೆ ಮೂಲ ಕಾರಣ ಸ್ಪರ್ಧೆ. ಇದರಲ್ಲಿ ಸಿಕ್ಕ ಮನುಷ್ಯ ಬಸವಳಿಯುತ್ತಾನೆ. ಇದರಿಂದ ತಪ್ಪಿಸಿಕೊಳ್ಳಲು ಗಾಂಧಿಯಿಸಂ ನೆರವಾಗಬಹುದೇ?

ಸ್ವಾತಂತ್ರಕ್ಕಾಗಿ ಜಗತ್ತಿನ ಸಾಮಾನ್ಯನೂ ಹೋರಾಡುವ, ಯಾವುದೇ ಆಸರೆಯಿಲ್ಲದೆ ಪುಂಡರ ದಬ್ಬಾಳಿಕೆಗೆ ಮಣಿಯದೆ ಒಂಟಿಯಾಗಿ, ಅಸಂಘಟಿತರು ಸಾಮೂಹಿಕವಾಗಿ ಎದುರಿಸುವ ಸಾಧ್ಯತೆ ದೊರಕಿದ್ದು ಗಾಂಧಿಯಿಸಂ ಇಂದ. ಪ್ರತಿಯೊಬ್ಬ ವ್ಯಕ್ತಿಯೊಳಗಿರುವ ಚೇತನವನ್ನು ಶಾಂತಿಯುತ ಪ್ರತಿಭಟನೆಯ ಆಯುಧವಾಗಿಸಿದ್ದು ಶಸ್ತ್ರ, ಅಸ್ತ್ರಗಳಿಲ್ಲದ ಸತ್ಯಾಗ್ರಹ ಮತ್ತು ಅಹಿಂಸಾ ಮಾರ್ಗ. ಸ್ವಾತಂತ್ರಕ್ಕಾಗಿ ಹಂಬಲಿಸಿ ತುಡಿದ ಅನೇಕ ರಾಷ್ಟ್ರಗಳ ಹೋರಾಟಗಾರರು, ಗಾಂಧೀವಾದವನ್ನು ಒಪ್ಪಿ, ಸ್ವೀಕರಿಸಿ, ವಿಸ್ತರಿಸಿ, ಪುನರ್ ರೂಪಿಸಿ ಬಳಸಿದ್ದಾರೆ. ಉದಾಹರಣೆಗೆ ಮಾರ್ಟಿನ್ ಲೂಥರ್ ಕಿಂಗ್, ನೆಲ್ಸನ್ ಮಂಡೇಲ ಇತ್ಯಾದಿ. "ಅನ್ಯಾಯವನ್ನು ಕಂಡು ಹನಿಯುವ ಕಣ್ಣು ಸಿಟ್ಟಿನಿಂದ ಕೆಂಪಾಗಲೂ ಬೇಕು" ಎಂಬ ನೋಟವನ್ನು ಲೋಹಿಯಾ ಕಲಿತದ್ದು ಗಾಂಧೀಜಿಯಿಂದ. ಗಾಂಧೀಜಿ ರೂಪಿಸಿದ ನಾಗರೀಕ ಅವಿಧೇಯತೆಯ ಪ್ರೇರಣೆಯಿಂದ ಬಂದ್ ಮತ್ತು ಘರಾವೋ ಅನ್ನು ಹೋರಾಟಕ್ಕೆ ಲೋಹಿಯಾ ಅಳವಡಿಸಿಕೊಂಡರು. ಆದರೆ ಇಂದು ಗಾಂಧೀಯಿಸಂ ಜನಜೀವನದಲ್ಲಿ ಅಳವಡಿಸಲು ಏಕೆ ವಿಫಲವಾಗುತ್ತಿದೆ? ಆ ದಿಸೆಯಲ್ಲಿ ಪ್ರಯತ್ನದ ಆಧ್ಯತೆ ಸಾಧ್ಯತೆ ಆಗಿಯೇ ಇಲ್ಲವೇ? ಇದು ಆಗಬೇಕದ್ದು ವ್ಯಕ್ತಿ ಮಟ್ಟದಲ್ಲಿ. ವ್ಯಕ್ತಿ, ಸ್ವಾವಲಂಭಿ, ಸ್ವಾಭಿಮಾನದ ಬದುಕನ್ನು ರೂಪಿಸಿಕೊಳ್ಳಲು ಬದ್ಧನಾಗಬೇಕಾಗುತ್ತದೆ. ಆ ಬದ್ಧತೆಯ ಜವಾಬ್ದಾರಿ ಕಾಣುತ್ತಿಲ್ಲ. " ಸ್ವಾತಂತ್ರ್ಯವೆಂಬುದು ಕೇವಲ ಭೌಗೋಳಿಕ ಅಥವಾ ರಾಜಕೀಯ ನಾಯಕತ್ವಕ್ಕೆ ಮಾತ್ರ ಸಂಬಂಧಿಸಿರುವುದಿಲ್ಲ. ಬದಲಾಗಿ ಜನರ ವೈಯಕ್ತಿಕ ಬದುಕಿಗೂ ಕೂಡ ಜವಾಬ್ದಾರಿಯಾಗಿರುತ್ತದೆ."

ಒಂದು ಕಟ್ಟಡದ ಅಥವಾ ಯಂತ್ರದ ಸುಭದ್ರತೆ ಅವುಗಳಲ್ಲಿರುವ ಒಂದೊಂದು ಬಿಡಿ ಬಿಡಿ ಭಾಗಗಳ ಗುಣಮಟ್ಟವನ್ನು ಅವಲಂಭಿಸಿರುತ್ತದೆ. ಒಂದೊಂದು ಅಂಗಗಳೂ ರೋಗರಹಿತವಾಗಿದ್ದರೆ ಆರೋಗ್ಯ ಪೂರ್ಣ ದೇಹವೆನ್ನಿಸಿಕೊಳ್ಳುತ್ತದೆ. ಜಾಗತಿಕ ಜನಮನದಲ್ಲಿ ಸಂಪದ್ಭರಿತವಾದರೂ, ದಟ್ಟ ದರಿದ್ರರ ದೇಶ ಭಾರತ ಎಂಬ ಅಭಿಪ್ರಾಯವಿದೆ. ಸ್ವಾತಂತ್ರಾ ನಂತರ 66 ವರ್ಷಗಳಲ್ಲಿ ಭಾರತ ಗಾಂಧೀಯಿಸಂ ಅನ್ನು ಅಳವಡಿಸಿಕೊಳ್ಳಲು ಸೋತಿದೆಯೇ? ವ್ಯಕ್ತಿಯ ಒಳಿತು ಸರ್ವರ ಒಳಿತಿನಲ್ಲಿ ಅಡಕವಾಗಿದೆ ಎಂಬ ಪ್ರಜ್ಞೆ ಜನಮನದಲ್ಲಿ ಮೂಡಿ ಕ್ರೀಯಾಶೀಲವಾಗಲು ಸಾಧ್ಯವಾಗಿಲ್ಲವೇ? ಗಾಂಧೀಯಿಸಂ ಅನ್ನು ಕೇವಲ ಹೊಗಳಿಕೆಗೆ ಮೀಸಲಾಗಿಸಿ ವೈಭವೀಕರಿಸುತ್ತಿದ್ದೇವೆಯೇ? ಅಥವಾ ಗಾಂಧೀ ಮಾರ್ಗವೆಂಬುದು ಕೈಗೆಟುಕದ ಸಾಧಿಸಲಾಗದ ಸಿದ್ಧಾಂತ ಎಂದು ಉಪೇಕ್ಷೆಯ ವ್ಯಂಗ್ಯದ ಅಣಕದ ನಗೆ ಚಾಟಿಕೆಯ ಸಂಗತಿಯೇ?

ಯಾವುದು ತನ್ನನ್ನು ಬೆಳೆಸಿಕೊಂಡು ರಕ್ಷಿಸಿಕೊಳ್ಳುವುದಿಲ್ಲವೋ ಅದು ಪ್ರಕೃತಿಯ ನಿಯಮದಂತೆ ರೂಪಾಂತರಗೊಳ್ಳುತ್ತದೆ. ಅಂದಾಗ ಇವತ್ತಿನ ಅಗತ್ಯಗಳಿಗೆ ತಕ್ಕಂತೆ ಗಾಂಧೀಯಿಸಂ ರೂಪಾಂತರಗೊಳ್ಳಲಿ. ಸಬಲ ಶಕ್ತ ರಾಷ್ಟ್ರ ಆ ದೇಶದ ಪ್ರಜೆಗಳನ್ನು ಅವಲಂಭಿಸಿದೆ. ಅಂದಾಗ ರಾಷ್ಟ್ರದ ಪ್ರತಿಯೊಬ್ಬನೂ ಸಬಲ ಶುದ್ಧನಾಗಿದ್ದರೆ ಅಂತಹ ಸಮೂಹವನ್ನು ಒಳಗೊಂಡ ರಾಷ್ಟ್ರ ಸ್ವಾಭಿಮಾನದ ಸ್ವಾವಲಂಭಿಯಾಗಿರುತ್ತದೆ.



– ಬಸವರಾಜು ಕೆ.ಆರ್

 

# Juxtaposition



ಸಂವಹನ ಚಟುವಟಿಕೆಗಳಲ್ಲಿ Juxtaposition ಅಂದರೆ ಒಂದರ ಪಕ್ಕ ಒಂದನ್ನು ಜೋಡಿಸುವುದು ಎಂದರ್ಥ. ಹಲವಾರು ಸಂವಹನ ಚಟುವಟಿಕೆಗಳಲ್ಲಿ ಸಂವಹನ ಅಂಶಗಳನ್ನು ಒಂದರ ಪಕ್ಕ ಒಂದನ್ನು ಹೇಗೆ ಜೋಡಿಸಿಟ್ಟಿದ್ದೀವಿ ಅನ್ನುವುದರ ಆಧಾರದ ಮೇಲೆ ಅರ್ಥ ನಿರ್ಣಯವಾಗುತ್ತದೆ. ಸಂವಹನ ಸೂಕ್ತವಾಗಬೇಕಾದರೆ ಪ್ರತಿಯೊಂದು ಸಂವಹನ ಅಂಶವು ತನ್ನ ಸುತ್ತ ಮುತ್ತ ಇರುವ ಅಂಶಗಳ ಜೊತೆಗೆ ಸೂಕ್ಷ್ಮವಾಗಿ ಹಾಗು ಯುಕ್ತವಾಗಿರ ಬೇಕಾಗುತ್ತದೆ. Juxtapositionನನ್ನು ಒಂದು ಭಾಷೆಯ ಅಲಂಕಾರವಾಗಿ ಬಳಸುವಾಗ ಸಂವಹನ ಅಂಶಗಳನ್ನು ಸರಳ ಹಾಗು ನೇರವಾಗಿ ಪಕ್ಕ ಪಕ್ಕ ಜೋಡಿಸುವುದಕ್ಕಿಂತ ಹೆಚ್ಚಿನದನ್ನು ನಿರೀಕ್ಷಿಸುತ್ತದೆ. ಭಾಷಾಲಂಕಾರದಲ್ಲಿ Juxtapositionನನ್ನು ಈ ಕೆಳಕಂಡಂತೆ ವ್ಯಾಖ್ಯಾನಿಸಬೇಕಾಗುತ್ತದೆ, "ಸಂವಹನ ಅಂಶದ ಅಥವಾ ಅಂಶಗಳ ಜೋಡಣೆ ಹೇಗಿರುತ್ತದೆ ಎಂದರೆ ಎರಡರ ನಡುವಿನ ಕೊಂಡಿ ಅಥವಾ ಸಂಪರ್ಕವನ್ನು ಕೆಡವಿ ಅಥವಾ ಹುದುಗಿರಿಸಿ, ಅದನ್ನು ಬಿಡಿಸುವಾಗ ಅಥವಾ ಅರ್ಥೈಸುವಾಗ ಒಂದು ವಿಧವಾದ ಆಶ್ಚರ್ಯ ಅಥವಾ ಗಲಿಬಿಲಿಯನ್ನು ಸೃಷ್ಟಿಸುತ್ತದೆ. ಜಪಾನಿನ ಹಯಕುಗಳಲ್ಲಿ ಈ ಲಕ್ಷಣಗಳನ್ನು ಸ್ಪಷ್ಟವಾಗಿ ಕಾಣುತ್ತೇವೆ.

ಈ ಸಂವಹನ ಅಂಶಗಳು ಒಂದಕ್ಕೊಂದು Juxtapose ಆಗಿವೆ. ಹಾಗೆಯೇ ಯಾವೊಂದು ಅಂಶಗಳ ನಡುವೆಯೂ ಸಂಬಂಧ ಅಥವಾ ಸಂಪರ್ಕ ಸ್ಪಷ್ಟವಾಗಿಲ್ಲ. ಯಾವೊಂದು ಪದದೊಂದಿಗೂ ಸಂಪೂರ್ಣ ನಿಕಟತೆ ಅಥವಾ ಬಂಧುತ್ವ ಏರ್ಪಟಿಲ್ಲ.

ಕೊಯ್ಲು ಚಂದ್ರ /ಸುಗ್ಗಿ ಚಂದ್ರ ಹಾಗು ತಾಳೆ ಮರದ ನೆರಳಿಗೆ ಕಾರ್ಯ ಕಾರಣ ಸಂಬಂಧವನ್ನು ನೋಡಬಹುದಾದರೂ ಹೊರನೋಟಕ್ಕೆ ಗೋಚರಿಸುವ ಅಥವಾ ಸಂಬಂಧ ಕಾಣ ಸಿಗದೆ ಇರುವುದರಿಂದ ಓದುಗ ಕಾಲ್ಪನಿಕ ನೆಗೆತವನ್ನು ಮಾಡಬೇಕಾಗುತ್ತದೆ. ಹಾಗೆಯೇ ಬೀಗ ಹಾಕಿದ ಬಾಗಿಲು ಮತ್ತು ಚಳಿಗಾಲದ ಚಂದ್ರ ಕೂಡ. ಈ ಪ್ರತಿಮೆಗಳಿಗೆ ಸಂಪರ್ಕ ಕಲ್ಪಿಸಲು ಹೆಚ್ಚಿನ ಕಾಲ್ಪನಿಕ ಪರಿಶ್ರಮದ ಅವಶ್ಯಕತೆಯಿದೆ. ಎರಡೂ ಹಯಕುಗಳಲ್ಲಿಯೂ ಮೊದಲನೆಯದು, ಪ್ರಾಕೃತಿಕ ಪ್ರತಿಮೆಯಾದರೆ ಎರಡನೆಯದು ಮಾನವ ಕುಲಕ್ಕೆ ಸೇರಿದ ಪ್ರತಿಮೆ. ಮೋದಲನೆಯ ಹಾಗು ಎರಡನೆಯ ಭಾಗಗಳ ನಡುವೆ ಘರ್ಷಣೆ ಹಾಗು ಉದ್ವೇಗಗಳನ್ನು ಉಂಟು ಮಾಡಲಾಗಿದೆ. ಇನ್ನೂ ಎರಡು ಉದಾಹರಣೆಗಳನ್ನು ನೋಡೋಣ:

ಹಯಕು 1

ಸುಗ್ಗಿಯ ಚಂದ್ರ
ಬಿದುರಿನ ಚಾಪೆಯ ಮೇಲೆ
ತಾಳೆ ಮರದ ನೆರಳು

ಹಯಕು 2

ಮರದ ಬಾಗಿಲು
ಬಿಗಿಮಾಡಿದ ಬೀಗ
ಚಳಿಗಾಲದ ಚಂದ್ರ



ಪ್ರತಿಯೊಂದು ಪದ್ಯದಲ್ಲೂ ಮೂರು ಚಿಕ್ಕ ಚಿಕ್ಕ ಸಾಲುಗಳಿವೆ. ಎರಡು ಪದ್ಯಗಳಲ್ಲೂ ಪದ್ಯದ ಅರ್ಥ ಮೂರು ಬೇರೆ ಬೇರೆ ಅಂಶಗಳಿಗೆ ಬಂದು ನಿಲ್ಲುತ್ತದೆ. ಒಂದರಲ್ಲಿ ಚಂದ್ರ, ಚಾಪೆ ಹಾಗು ನೆರಳು; ಮತ್ತೊಂದರಲ್ಲಿ ಗೇಟು, ಬೀಗ ಹಾಗು ಚಳಿಯ ಚಂದ್ರ.

ಹಯಕು 3

ವಸಂತದ ಮಳೆ
ತಾರಸಿನ ಮೇಲೆ ನೆನೆಯುತ್ತಿರುವ
ಒಂದು ಮಗುವಿನ ಬಟ್ಟೆಯ ಚೆಂಡು.

ಹಯಕು 4

ಬೆಳಗಾಗುವುದರೊಳಗೆ
ನನ್ನ ಕತ್ತಿ ತುಕ್ಕು ಹಿಡಿದಿದೆ
ಮೇ ಮಳೆಗಳು

ಮೇಲಿನ ಹಯಕುಗಳಲ್ಲಿರುವ ಪ್ರತಿಮೆಗಳ ನಡುವೆ ಸಂಬಂಧ ಏರ್ಪಡಿಸಿ ಈ ಕೆಳಕಂಡಂತೆ ಓದಿಕೊಳ್ಳಬಹುದಾದರೂ ಕೂಡ ಇಂಥ ವಿವರಣೆ ಹಯಕುಗಳ ಸೂಚ್ಯಾರ್ಥಗಳನ್ನು ಕ್ಷೀಣಿಸುತ್ತದೆ.

"ಮಗುವಿನ ಬಟ್ಟೆಯ ಚಂಡು ವಸಂತದ ಮಳೆಗೆ ತಾರಸಿಯ ಮೇಲೆ ನೆನೆಯುತ್ತಿದೆ."

"ಬೆಳಗಾಗುವುದರೊಳಗೆ ಮೇ ಮಳೆಗೆ ನನ್ನ ಕತ್ತಿ ತುಕ್ಕು ಹಿಡಿದಿದೆ."

ಇಂಥಹ ವಿವರಣೆ, ಸಂವಹನದ ಬೇರೆ, ಬೇರೆ ಅಂಶಗಳ ನಡುವಿನ ಸಂಬಂಧದ ವೈವಿಧ್ಯತೆಯನ್ನು ಮಿತಿಗೊಳಿಸುತ್ತದೆ. ಈ ಅಂಶಗಳ ನಡುವಿನ ಸಂಬಂಧವನ್ನು ವಿವರಿಸದೇ ಇದ್ದರೆ ಸಂವಹನದ ಅವಕಾಶಗಳು ಹೆಚ್ಚುತ್ತವೆ. ವೈರುಧ್ಯವಿರುವ ವಿಷಯಗಳನ್ನು ಅಕ್ಕ ಪಕ್ಕ ಇಟ್ಟಿರುವುದರಿಂದ ಹಾಗು ಸ್ಪಷ್ಟ ಸಂಬಂಧಗಳನ್ನು ಸೂಚಿಸದೇ ಇರುವುದರಿಂದ ಒಂದು ವಿಧವಾದ ಸಂವಹನದ ಪಾರುಪತ್ಯ ಹಾಗು ಬಲ ಏರ್ಪಟ್ಟಿದೆ.

ಹಯಕುಗಳನ್ನು ಮೂಲವಾಗಿ ಜಪಾನಿನಲ್ಲಿ 17 ಮತ್ತು 18ನೇ ಶತಮಾನದಲ್ಲಿ ಬರೆಯಲಾಯಿತು. ಇಂಥದೇ ತಾಂತ್ರಿಕತೆಯನ್ನು 20ನೇ ಶತಮಾನದ ಇಂಗ್ಲೀಷ್ ಕಾವ್ಯದಲ್ಲೂ ಕಾಣುತ್ತೇವೆ. ಎಜ್ರಾ ಪೌಂಡ್ ಬರೆದ ಒಂದು ಸಣ್ಣ ಕವಿತೆಯನ್ನು ನೋಡೋಣ.

L'art 1910

"ಹಸಿರು ತಾಳಕವನ್ನು ಮೊಟ್ಟೆಯ ಬಿಳಿಯ ಬಣ್ಣದ ಬಟ್ಟೆಗೆ ಹಚ್ಚಿ
ಜಜ್ಜಿದ ಸ್ಟ್ರಾಬೆರಿ ಹಣ್ಣುಗಳು! ಬನ್ನಿ ಕಣ್ಣಿಗೆ ಹಬ್ಬವನ್ನುಂಟು ಮಾಡೋಣ"

ಪ್ರತಿಮಾ ಚಳುವಳಿ (Imagism) ತನ್ನ ಉಚ್ಛ ಕಾಲದಲ್ಲಿದ್ದಾಗ (1910–20) ಎಜ್ರಾ ಪೌಂಡ್ ಇದನ್ನು ಬರೆದನು. ಹಯಕುವಿನ ಥರಹವೇ ಇರುವ ಈ ಪದ್ಯ ಬ್ರಿಟನ್ ಮತ್ತು ಅಮೇರಿಕಾದ ಸಾಹಿತಿಗಳಲ್ಲಿ ಹೊಸ ರೀತಿಯ ಕಾವ್ಯ ಪ್ರಯೋಗಗಳನ್ನು ಮಾಡಲು ಉತ್ತೇಜಿಸಿತು. ಆಧುನಿಕತೆಯ ಪ್ರಮುಖ ಲಕ್ಷಣವಾದ ಪ್ರಯೋಗಶೀಲತೆಯಲ್ಲಿ Juxtaposition ಅನ್ನುವುದು ಪ್ರಮುಖ ತಾಂತ್ರಿಕತೆಯಾಗಿತ್ತು. ಟಿ ಎಸ್ ಎಲಿಯಟ್ ತನ್ನ ವೇಸ್ಟಲ್ಯಾಂಡ್ ಕಾವ್ಯದಲ್ಲಿ ವೈವಿಧ್ಯಮಯ, ವಿಭಿನ್ನವಾದ ಸಂವಹನ ಹಾಗು ಭಾಷಾ ಅಂಶಗಳನ್ನು, (ಒಪೆರಾಗಳಿಂದ, ಬೈಬಲ್ಲಿನಿಂದ, ಭಗವದ್ಗೀತೆಯಿಂದ) ವಸ್ತುಗಳನ್ನು, ವಾಕ್ಯಗಳನ್ನು ಜೋಡಿಸಿ ಹೊಸತನ ಮೆರೆದಿದ್ದಾನೆ.

ಎಲ್ಲಾ Juxtapositionಗಳಲ್ಲೂ ಒಂದೇ ರೀತಿಯಾದ ಪರಿಣಾಮ ಇರುತ್ತದೆ ಎಂದು ಊಹಿಸಲಾಗದು. Juxtaposition ನಿಂದಾಗಿ ವಿಸ್ತಾರವಾಗುವ ಲಕ್ಷಣಗಳು ಒಂದರ ಮೇಲೊಂದು ಹೆಣೆದುಕೊಂಡಿರುತ್ತವೆ. ಇಂಥಹ Juxtaposition ಎರಡು ಸಂವಹನ ಅಂಶಗಳನ್ನು ಎದಿರು ಬದಿರಾಗಿಸುವುದರಿಂದ ಎರಡೂ ಅಂಶಗಳ ನಡುವೆ ಘರ್ಷಣೆ ಏರ್ಪಡುವುದು. Juxtaposition ನನ್ನು ನಾವು ಚಲನ ಚಿತ್ರಗಳಲ್ಲಿ ನೋಡಬಹುದು. ಉದಾಹರಣೆಗೆ, ಮೊದಲ ಇಮೇಜ್ ಪ್ರೀತಿಸುತ್ತಿರುವ ಯುವಕ ಯುವತಿಯರನ್ನು ತೋರಿಸಿದರೆ, ಎರಡನೆಯ ಪ್ರತಿಮೆಯಲ್ಲಿ ಜ್ವಾಲಾಮುಖಿಯನ್ನು ತೋರಿಸುವುದರಿಂದ ವೈವಿಧ್ಯಮಯ ಅರ್ಥಗಳನ್ನು ಸೃಷ್ಟಿಸಬಹುದು. ಜ್ವಾಲಾಮುಖಿಯು ಪ್ರೀತಿಗೆ ಇರುವ ಸವಾಲುಗಳು, ಪ್ರತಿಭಟನೆಗಳು, ಕಷ್ಟ–ನಷ್ಟಗಳ ಸಂಕೇತವಾಗಬಲ್ಲದು.

**– ಜ್ಯೋತಿ ಕೆ.ಬಿ**
**ಆಂಗ್ಲ ವಿಭಾಗ**
**ಸರ್ಕಾರಿ ಪದವಿ ಕಾಲೇಜು, ಗುಬ್ಬಿ**

ಆಧಾರ:
Martin Montgomery, Alan Durant, Nigel Fabb, Tom Furnies and Sara Mills, "Ways of Reading", New York, Routledge, 1995 print.



ಪ್ರಸ್ತುತ 

# Read and Relax, Please : ಹೆನ್ರಿ ಡೇವಿಡ್ ಥ್ಯರೋವಿನ 'ಓದು'

'Reading' ಅನ್ನುವುದು ನಾಲ್ಕು ಪ್ರಮುಖ ಭಾಷಾ ಕಲಿಕಾ ಕೌಶಲ್ಯಗಳಲ್ಲಿ ಒಂದಾಗಿದೆ. ಭಾಷಾತಜ್ಞರು ಅನುಕ್ರಮವಾಗಿ ಇವುಗಳನ್ನು listening-ಆಲಿಸುವುದು, speaking-ಅಭಿವ್ಯಕ್ತಿಸುವುದು, Reading-ಓದುವುದು ಮತ್ತು writing-ಬರೆಯುವುದು ಎಂಬುದಾಗಿ ವಿಂಗಡಿಸಿದ್ದಾರೆ. listening ಮತ್ತು Reading ಗಳನ್ನು receptive skills ಎಂದು, speaking ಮತ್ತು writing ಗಳನ್ನು productive skills ಎಂದು ಅವುಗಳ ಕಲಿಕಾ ಕಾರ್ಯಗಳಿಗೆ ಅನುಗುಣವಾಗಿ ಎರಡು ಗುಂಪುಗಳನ್ನಾಗಿ ವಿಭಜಿಸಲಾಗಿದೆ.

Read ಎನ್ನುವ ಧಾತು ಓದು ಎಂಬ ಅರ್ಥವನ್ನು ಸೂಚಿಸುತ್ತದೆ. Reader ಎಂಬ ನಾಮಪದವನ್ನು 'ಓದುಗ' ಮತ್ತು ಪಠ್ಯ (text) ಎಂಬುದಾಗಿ ಅರ್ಥೈಸಲಾಗಿದೆ. 'Reading' ಅನ್ನು ಕ್ರಿಯಾ-ಕೃದಂತವಾಗಿ ಬಳಸಲಾಗಿದೆ. Reading ಪದ ಕೆಲವೊಮ್ಮೆ ಒಂದು ಸಾದಾ ವಾಕ್ಯದಲ್ಲಿ ಕತೃ ಸ್ಥಾನದಲ್ಲಿ Gerund ಆಗಿ ಬಳಕೆಯಾಗಬಹುದು. ಈ ಮೂರೂ ಪದಗಳನ್ನು ಒಂದೇ ವಾಕ್ಯದಲ್ಲಿ ಹೀಗೆ ಬಳಸಬಹುದು:

A Reader(N) reads(V) the reader(N-Text)

Or

Ravi is a good reader (N) who is reading(V4) English Reader(N-Text)

ಹೀಗೆ 'Read' ಎನ್ನುವ ಒಂದು ಪದವು ವಿವಿಧ ರೂಪಗಳಲ್ಲಿ, ಸ್ಥಾನಗಳಲ್ಲಿ ಮತ್ತು ಅರ್ಥಗಳಲ್ಲಿ ಬಳಕೆಯಾಗುತ್ತದೆ. ಭಾಷಾ ಜ್ಞಾನವನ್ನು ಮತ್ತು ವಿಷಯ ಗ್ರಹಿಕೆಯನ್ನು ವಿಸ್ತಾರಗೊಳಿಸಲು Reading ಕೌಶಲ್ಯವು ಬಹುಮುಖ್ಯವಾದ ಭಾಷೆಯನ್ನು ಸಮೃದ್ಧಗೊಳಿಸುವ ಸಾಧನವಾಗಿದೆ. ಪ್ರಸ್ತುತ ಶಿಕ್ಷಣ ವ್ಯವಸ್ಥೆಯಲ್ಲಿ ಓದುವ ಅಭಿರುಚಿಯನ್ನು ಸೂಕ್ಷ್ಮವಾಗಿ ಗಮನಿಸಿದ ಇಂಗ್ಲೀಷ್ ಪ್ರಾಧ್ಯಾಪಕ ಮತ್ತು ಭಾಷಾತಜ್ಞ I A Richards, ತನ್ನ 'Four Kinds of Meaning' ವಿಮರ್ಶಾ ಕೃತಿಯಲ್ಲಿ "Reading Matters less Today" ಎಂಬ ಆತಂಕವನ್ನು ವ್ಯಕ್ತಪಡಿಸುತ್ತಾನೆ. ಈ ಮಾತು ಪ್ರಸಕ್ತ ಕಲಿಕಾ ವಿಧ್ಯಾಮಾನಗಳಿಗೆ ಹಿಡಿದ ಕೈಗನ್ನಡಿಯಾಗಿದೆ. ಕಾರಣವನ್ನು ಯೋಚಿಸಿದಾಗ listening ಎನ್ನುವುದು ಬಹುಮಾಧ್ಯಮಗಳ ಸಂಪರ್ಕ ಸಾಧನಗಳಿಂದ ಭಾಷಾ ಕಲಿಕೆಯ ಮೇಲೆ ಹೆಚ್ಚು ಪ್ರಭಾವ ಬೀರಿರುವುದು ಗೋಚರವಾಗುತ್ತದೆ; ಹಾಗು ಇದು ಬಹುಸಂಖ್ಯಾತರನ್ನು ಆಕರ್ಷಿಸುತ್ತದೆ ಕೂಡ. ಆದ್ದರಿಂದ ಪ್ರಸ್ತುತ ಸಂದರ್ಭದಲ್ಲಿ ಓದುವ ವರ್ಗದಲ್ಲಿ ಆಸಕ್ತಿ ಕ್ಷೀಣಿಸುತ್ತಿರುವುದು ತಿಳಿಯುತ್ತದೆ. ಓದುವ ಮೂಲಕ ತಿಳಿಯುವ ಮತ್ತು ಗ್ರಹಿಸುವ ಮಾಹಿತಿಯನ್ನು ಮತ್ತು ಪ್ರಾಪಂಚಿಕ ಜ್ಞಾನವನ್ನು listening ಮೂಲಕ ವೇಗವಾಗಿ ಪಡೆಯಲು ಸಾಧ್ಯವಾಗಿದೆ. ವಿಶೇಷವೇನೆಂದರೆ ವಿದ್ಯಾರ್ಥಿಗಳಿಗೆ ಕಲಿಸುವ ಶಿಕ್ಷಕರಲ್ಲೂ ಸಹ ಓದುವ ಕ್ರಿಯೆ ಮತ್ತು ಅಭಿರುಚಿ ಕ್ರಮೇಣವಾಗಿ ಕಡಿಮೆಯಾಗುತ್ತಿರುವುದನ್ನು ಸೂಕ್ಷ್ಮವಾಗಿ ಗಮನಿಸಿದರೆ I A Richards ನ ಆತಂಕ ಕಟುವಾಸ್ತವದ ಸಂಗತಿಯಾಗಿದೆ. ಓದುವ ಕ್ರಿಯೆಯು ಗಂಭೀರವಾಗಿ ಕ್ಷೀಣಿಸುತ್ತಿರುವುದರಿಂದ ಪ್ರಸ್ತುತ ಲೇಖನದಲ್ಲಿ Henry David Thoreau ತಮ್ಮ 'Reading' ಎಂಬ ಪ್ರಾಯೋಗಿಕ ಪ್ರಬಂಧದಲ್ಲಿನ ಓದಿನ ಪ್ರಾಮುಖ್ಯತೆಯನ್ನು ಕುರಿತ ಗಂಭೀರ ಚಿಂತನೆಗಳನ್ನು ಸ್ಮರಿಸುವ ಮತ್ತು ಅವಲೋಕಿಸುವ ಅನಿವಾರ್ಯತೆಯನ್ನು ಪುನರ್-ಚಿಂತನೆಗೊಳಪಡಿಸುವ ಪ್ರಯತ್ನ ಮಾಡಲಾಗಿದೆ.



"To read well, that is, to read true books in true spirit is a noble exercise and one that will tax the reader more than any exercise which customs of the day esteem." ಎಂದು Reading ಕುರಿತು Henry David Thoreau ಹೇಳುತ್ತಾರೆ. ಅಂದರೆ ತೆರಿಗೆ ರಹಿತವಾದ ಶ್ರೇಷ್ಠ ಅಭ್ಯಾಸವೆಂದರೆ ಅದು ಓದು ಎಂದು ಅಮೇರಿಕಾದ ಈ ಸುಪ್ರಸಿದ್ಧ ಲೇಖಕ ತನ್ನ ಪ್ರಾಯೋಗಿಕವಾದ ಕೃತಿ ವಾಲ್ಡೆನ್ ನಲ್ಲಿ ಉಲ್ಲೇಖಿಸುತ್ತಾರೆ. ಇಂದು ಯಾವುದೇ ಸರಕನ್ನು ತೆರಿಗೆ ರಹಿತವಾಗಿ ಬಳಸಲು ಸಾಧ್ಯವಿಲ್ಲ. ಜಾಗತೀಕರಣದ ಪರಿಣಾಮದಿಂದ ತೆರಿಗೆ ವಿಧಿಸುವುದು/ತೆರಿಗೆ ಪಾವತಿಸುವುದು ಅನಿವಾರ್ಯವಾದ ನಿರ್ಭಂದವಾಗಿದೆ. ನಗರೀಕರಣದ–ನಾಗರೀಕ ಬದುಕಿನ ಸಂದರ್ಭದಲ್ಲಿ ಬಳಸಿದ ವಸ್ತುಗಳನ್ನು ಪುನಃ ಪುನಃ ಬಹುಕಾಲ ಬಳಸಲು ಸಾಧ್ಯವಾಗುವುದಿಲ್ಲ.ಅದರಿಂದ ತಾನು ಬಯಸಿದ ಆಧುನಿಕ ವಸ್ತುಗಳನ್ನು ತಾತ್ಕಾಲಿಕವಾಗಿ ಬಳಸಲು ಸಿದ್ಧರಾಗುವ ಮನ–ಸ್ಥಿತಿಯು ಅನಿವಾರ್ಯವಾಗಿದೆ. ಏಕೆಂದರೆ ಇಂದಿನ ಮಾರುಕಟ್ಟೆಯಲ್ಲಿ ಯಾವುದೇ ಯಂತ್ರ ನಿರ್ಮಿತ ಉತ್ಪಾದಕಗಳಿಗೆ ಸಾಮಾನ್ಯವಾಗಿ ಒಂದು ಅಥವಾ ಮೂರು ವರ್ಷಗಳ ವಾರೆಂಟಿಯನ್ನು ನಿಗಧಿಪಡಿಸಲಾಗಿದೆ. ಆದರೆ ಒಂದು ಶ್ರೇಷ್ಠ ಸಾಹಿತ್ಯ ಕೃತಿಯನ್ನು ಒಮ್ಮೆ ಕೊಂಡರೆ ಅದರ ಉಪಯೋಗವನ್ನು ಹತ್ತಾರು ತಲೆಮಾರುಗಳವರೆಗೂ ತೆರಿಗೆ ರಹಿತವಾಗಿ ಪಡೆಯಬಹುದು ಹಾಗು ಒಂದು ಶ್ರೇಷ್ಠ ಕೃತಿಯ ಓದಿನಿಂದ ನೂರಾರು ಚಿಂತನಾಶೀಲ ಕೃತಿಗಳನ್ನು ಪ್ರತಿಭಾ ಕೌಶಲ್ಯದಿಂದ ಪುನಃರಚಿಸಬಹುದು. ಹೀಗೆ ಪುಸ್ತಕಗಳು ಪುನರ್–ರಚನೆಯನ್ನು ಪ್ರೇರೇಪಿಸುತ್ತವೆ. ಈ ಪ್ರಕ್ರಿಯೆಯು ಯುಗಯುಗಗಳಲ್ಲಿ ಶಾಶ್ವತ ಜ್ಞಾನದ ನಿಧಿಯಾಗಿ ಮನುಕುಲದ ಸಂಗಾತಿಯಾಗಿ ಬೆಂದ–ನೊಂದ ಮನಸ್ಸಿಗೆ ಅದ್ವಿತೀಯವಾದ ಶಾಂತಿ ಮತ್ತು ಪಂಚೇಂದ್ರಿಯಗಳಿಗೆ ಮುದಕೊಡುವ ಸತ್ವ, ಸತ್ಯವನ್ನು ಹೊಂದಿರುತ್ತದೆ. ಜಗತ್ತಿನಲ್ಲಿ ಸರ್ವಕಾಲಿಕವಾಗಿ ಸಂರಕ್ಷಿಸಲ್ಪಡುವ ಸಂಪತ್ತು ಅದು ಪುಸ್ತಕ ಮಾತ್ರ ಎಂದು ಹೇಳುತ್ತಾರೆ. ಒಂದು ತಲೆಮಾರಿನ ಅಥವಾ ಒಂದು ರಾಷ್ಟ್ರದ ಸಮೃದ್ಧ ಸಂಪತ್ತನ್ನು ನಿರ್ಧರಿಸುವ ಅಂಶ ಪುಸ್ತಕಗಳಿಗೆ ಇದೆ ಎನ್ನುತ್ತಾರೆ.ಥೋರೋ ಪ್ರಕಾರ Books are the best friends of man. ಜಾನ್‌ಕೀಟ್ಸ್ ತನ್ನ ಶ್ರೇಷ್ಠ ಪ್ರಗಾಥ 'Ode on a Grecian Urn' ನ ಕೊನೆಯ ಪಂಕ್ತಿಯಲ್ಲಿ ತನ್ನ ಕಲಾಕೃತಿಯಾದ ಅರ್ನ ಎಲ್ಲಾ ಕಾಲಕ್ಕೂ ಎಲ್ಲರಿಗೂ ಗೆಳೆಯನಾಗಿರಬೇಕು ಎನ್ನುವ ಆಶಯ ವ್ಯಕ್ತಪಡಿಸುತ್ತಾನೆ. ಏಕೆಂದರೆ 'Beauty is truth and truth beauty' ಎಂಬ ಸಂದೇಶವನ್ನು ಓದುಗರಿಗೆ ದರ್ಶನ ಮಾಡಿಸುವ ಜವಾಬ್ದಾರಿಯು ಅರ್ನ ಗೆ ಎಷ್ಟಿದೆಯೋ ಅಷ್ಟೇ ಕವಿಗೆ ಕೂಡ ಇದೆ. ಶ್ರೇಷ್ಠ ಕೃತಿಯು ಅಕ್ಷರ ರೂಪದಲ್ಲಿ ಬದುಕಿನ ದರ್ಶನವನ್ನು ಸಮರ್ಥವಾಗಿ ನಿರ್ವಹಿಸಲ್ಪಡುವುದು. ಆದ್ದರಿಂದ ಉತ್ತಮ ಕೃತಿಗಳನ್ನು ಓದುವುದು, ಉತ್ತಮ ಕ್ರಿಯಾಶೀಲ ಸಂವೇದನೆ, ಚಿಂತನೆಗೆ ದಾರಿದೀಪವಾಗುತ್ತದೆ. ಹಾಗೆಯೇ 'Select and read' ಎಂಬ ಎಚ್ಚರಿಕೆಯನ್ನೂ ಸಹ ಥೋರೋ ನೀಡುತ್ತಾನೆ.

ಸರ್ವಕಾಲಕ್ಕೂ ಪರಮೋಚ್ಚ ಗೆಳೆಯನೆಂದರೆ ಅದು ಪುಸ್ತಕ ಮಾತ್ರ, ನಮ್ಮ ಜೀವಿತ ಕಾಲದಲ್ಲಿ ಗೆಳೆಯನೊಬ್ಬನ ಸಂಬಂಧವು ನಾವು ಇರುವ ತನಕ ಮಾತ್ರ ಸೀಮಿತವಾಗಿರುತ್ತದೆ. ಇದೇ ಸಂಬಂಧವು ಕಾವ್ಯ ಅಥವಾ ಮಹಾಕಾವ್ಯದ ಬಗೆಯ ಸಾಹಿತ್ಯರೂಪಕವಾಗಿದ್ದರೆ ಅದು ಅಮರವಾಗಿರುತ್ತದೆ. ಅಂದರೆ ಕೃತಿಯು mortal ಆದ ಮಾನವನನ್ನು immortal ಆಗಿಸುವ ಉನ್ನತ ಕೈಂಕರ್ಯವನ್ನು ನಿರ್ವಹಿಸುತ್ತಿರುತ್ತದೆ. ಅಲ್ಲದೇ ಮಾನವ ಸಂಬಂಧವನ್ನು ಎಲ್ಲಾ ಕಾಲಕ್ಕೂ ನಿರಂತರವಾದ ಕಾಲಾತೀತವಾದ ಸ್ನೇಹ ಸೇತುವೆಯನ್ನು ಬೆಸೆಯುವ ಕಾರ್ಯವನ್ನು ಮಾಡುತ್ತಿರುತ್ತದೆ.

'ಎಲ್ಲರೊಳಗೊಂದಾಗು ಮಂಕುತಿಮ್ಮ' ಎನ್ನುವ ಡಿ.ವಿ.ಜಿ ಅವರ ಆಶಯದಂತೆ ಕ್ಲಾಸಿಕ್ ಕೃತಿಗಳ ಓದಿನಿಂದ ಓದುಗನಲ್ಲೂ ಎಲ್ಲರೊಳಗೊಂದಾಗುವ ಗುಣವನ್ನು ರವಾನಿಸುತ್ತದೆ ಮತ್ತು ಪ್ರೇರೇಪಿಸುತ್ತದೆ, ಶ್ರೇಷ್ಠ ಕೃತಿಕಾರನು ಅನಭಿಶಕ್ತ ದೊರೆಯಂತೆ ಜಗತ್ತನೇ ಆಳುವ ಪ್ರಭಾವಿಸುವ ಮತ್ತು ಆಲಂಗಿಸುವ ಶಕ್ತಿವಂತನಾಗಿರುತ್ತಾನೆ. ಹಾಗೆಯೇ ಪುಸ್ತಕದ ಓದು ಮಾನವನ ಪ್ರಜ್ಞೆ ಮತ್ತು ಬುದ್ಧಿಯನ್ನು ಸದಾ ಎಚ್ಚರದಲ್ಲಿಡಲು ಪ್ರಯತ್ನಿಸುತ್ತದೆ. ಆದ್ದರಿಂದ ಪ್ರತಿಯೊಬ್ಬ ಓದುಗನೂ ಮುಸ್ಲಿಂ ಬಾಂಧವರು ಒಮ್ಮೆ ಮೆಕ್ಕಾ ಅಥವಾ ಮದೀನಕ್ಕೆ ಯಾತ್ರೆ ಮಾಡಿ ಮುಕ್ತಿ ಪಡೆಯುವಂತೆ ಒಂದು ಕ್ಲಾಸಿಕ್ ಕೃತಿಯನ್ನು ಗಂಭೀರವಾಗಿ ಓದಬೇಕೆನ್ನುವುದು ಥೋರೋ ವಿನ ಪ್ರಭಲವಾದ ನಂಬಿಕೆಯಾಗಿದೆ. ಇಲ್ಲವಾದಲ್ಲಿ ಬದುಕಿನ ಪೂರ್ಣ ಪ್ರಜ್ಞೆ ಮತ್ತು ಸತ್ಯಾಸತ್ಯತೆಗಳ ಸಂದರ್ಶನವನ್ನು ಅನುಭವಿಸಲು ವಿಫಲರಾಗುತ್ತೇವೆ ಎಂದು ಎಚ್ಚರಿಸುತ್ತಾನೆ.

ಇಂದು ಬಹುತೇಕ ಅಕ್ಷರ ಜ್ಞಾನಿಗಳಾದ ನಾವು ನಮ್ಮ ವ್ಯವಹಾರ ಬದುಕಿಗೆ ಬೇಕಾಗುವಷ್ಟು ಸೀಮಿತ ಜ್ಞಾನಕ್ಕಾಗಿ ಓದುವ ಪ್ರವೃತ್ತಿಯನ್ನು ಕಂಡು ಥೋರೋ ವಿಷಾದ ವ್ಯಕ್ತಪಡಿಸುತ್ತಾರೆ. ಉತ್ತಮ ಪುಸ್ತಕಗಳನ್ನು ಓದುವುದು ಉತ್ತಮ ಬೌದ್ಧಿಕ ಮತ್ತು ಭಾವನೆಗಳ ಸಂಯೋಜನಾತ್ಮಕ ವ್ಯಾಯಾಮವಾಗಿರುತ್ತದೆ. ಇದರಿಂದ ಓದುಗನು ತತ್ವಜ್ಞಾನಿಯ ಹಾಗು ತತ್ವಜ್ಞಾನಿಯು ಓದುಗನ ದರ್ಶನವನ್ನು ಪಡೆಯಲು ಪೂರಕವಾಗಿರುತ್ತದೆ. ಹೀಗೆ ಕೃತಿಕಾರ ಮತ್ತು ಓದುಗರಿಬ್ಬರ ಪ್ರಯತ್ನವು ಕತ್ತಲ ಜಗತ್ತಿಗೆ ಅರಿವಿನ ಬೆಳಕನ್ನು ಚೆಲ್ಲುವುದೇ ಆಗಿರುತ್ತದೆ. ಈ ಮೂಲಕ ಓದು ಕತ್ತಲಿನ್ನಲ್ಲಿರುವ ನಮ್ಮ ಕೊಳೆಯನ್ನು ತೊಳೆದು ನಿರ್ಮಲಗೊಳಿಸುವ ಕಾರ್ಯವನ್ನು ಮಾಡುತ್ತದೆ.

ಸದಾ ಚಿಂತೆಯಲ್ಲಿ ಬಳಲುತ್ತಿರುವ ನಮ್ಮ ಮನಸ್ಸುಗಳಿಗೆ ಓದುವ ಅಭಿರುಚಿಯು ಚಿಂತೆಯಿಂದ ಮುಕ್ತರನ್ನಾಗಿ ಚಿಂತನಶೀಲರನ್ನಾಗಿಸುತ್ತದೆ. ಜಾಗತಿಕ ಸವಾಲುಗಳನ್ನು ಎದುರಿಸಲು ಚಿಂತನಾಶೀಲರಾಗುವ ಅನಿವಾರ್ಯತೆಯಿದೆ. ಬದುಕು ದುರ್ಬಲವಾಗುತ್ತಾ ಅನೇಕ ರೀತಿಯ ಒತ್ತಡಗಳು ವ್ಯಾಕುಲತೆಗಳು ಪ್ರಭಲವಾಗುತ್ತವೆ. ಬದುಕಿನ ಸವಾಲುಗಳನ್ನು ಅರ್ಥ ಮಾಡಿಕೊಂಡು ಎದುರಿಸಲು 'Reading' ಪ್ರಮುಖ ಪಾತ್ರವಹಿಸುತ್ತದೆ ಎಂದು ಥೋರೋ ಪ್ರತಿಪಾದಿಸುತ್ತಾನೆ.



– ಶ್ರೀನಿವಾಸಪ್ಪ .ಜಿ.
ಆಂಗ್ಲ ವಿಭಾಗ, ಸರ್ಕಾರಿ ಪದವಿ ಕಾಲೇಜು
ಹುಳಿಯಾರು

## ಕವಿತೆ — ಅಮರ ಪ್ರೇಮ

ಒಂದು ದಿನ ನಾ ಬರೆದೆ ಅವಳ ಹೆಸರ ಸಮುದ್ರ ತಟದಲಿ,
ಆದರೆ ಬಂದ ಅಲೆಗಳು ಅಳಿಸಿತಲ್ಲ ಅದೆಲ್ಲವನು;
ಮತ್ತೊಮ್ಮೆ ನಾ ಬರೆದೆ ಅದನು ಇನ್ನೊಂದು ಕೈಯಲಿ,
ಆದರೆ ಬಂದ ಅಲೆ, ತನ್ನ ಸುಲಿಗೆಯಿಂದ ಮಾಡಿತು ನನಗೆ ನೋವನು.
ಮೂರ್ಖ, ಹೇಳಿದಳಾಕೆ, ಅದು ಪರಿಶೋಧನೆಯ ವ್ಯರ್ಥ ಪ್ರಯತ್ನ,
ಸಾವಿರುವ ವಸ್ತುಗಳೇಗೆ ಶಾಶ್ವತವಾಗುವವು,
ನಾನು–ನನಗೂ ಸಹ ಈ ತರಹದ ಕೃಶತ್ನ,
ನನ್ನ ಹೆಸರೂ ಕೂಡಾ ಇದೆ ರೀತಿ ಕೊನೆಗಾಣುವವು.
ಅಂತಲ್ಲ, (ನಾ ಹೇಳಿದೆ) ಬಿಡು ನಿನ್ನ ಯೋಚನೆ
ಬೆಲೆಯಿಲ್ಲದ ವಸ್ತುಗಳಂತೆ
ಮಣ್ಣಲ್ಲಿ ಮಣ್ಣಾಗು, ಆದರೆ ನೀನಿರುವೆ ಹೆಸರೊಂದಿಗೆ ಹಸಿರಂತೆ:
ನನ್ನೆಲ್ಲಾ ಕವಿತೆಗಳಲ್ಲಿ, ನಿನ್ನ ಅಪರೂಪದ
ಸದ್ಗುಣಗಳೇ ಚಿರಂತನತೆ,
ಹಾಗೆ ಸ್ವರ್ಗದೊಳಗೆ ನಿನ್ನ ಹೊಳೆವ ಹೆಸರ ಬರೆವಂತೆ,
ಎಲ್ಲಿ, ಯಾವಾಗ ಸಾವು ಇಡೀ ಜಗತ್ತನ್ನೇ
ಗೆಲ್ಲಲಿರುವುದೋ
ನಮ್ಮ ಪ್ರೀತಿ ಸಹ ಅಂತೆ ಜೀವಂತ ಮತ್ತೆ ನಂತರ ಜೀವನ ವಸಂತ.

**(Edmund Spenser ನ Ammoretti Sonnet # 75 )**

ಕನ್ನಡಕ್ಕೆ –

- ಸೂರ್ಯಕೃಷ್ಣ
ಪ್ರಥಮ ಎಂ ಎ, ಆಂಗ್ಲವಿಭಾಗ
ಗುಬ್ಬಿ

# ಮೂರು ಮುಖಗಳು

ಇಡೀ ದಿನ ಕೂಲಿ ನಾಲಿ ಮಾಡಿದ ದಣಿವು
ಸಂಜೆ ಕುಡಿತ, ಹೊಡೆತ ಕಣ್ಣೀರು ಕೂಳು
ರಾತ್ರಿ ನಾಲ್ಕು ಮಕ್ಕಳೊಡನೆ ಇನ್ನೊಂದಕ್ಕೆ ನಾಂದಿ
ನಿಟ್ಟುಸಿರಿನ ನಡುವೆಯೂ 'ಆತ ತನ್ನ ದೈವ'

ಗಂಡ, ಮಕ್ಕಳು, ಆಫೀಸು ನಿಲ್ಲದ ದುಡಿತ
ನಗೆಯ ಬದುಕಿನಲ್ಲಿ ಬದುಕೆಲ್ಲ ನಿರ್ವಾತ
ಗಿಲೀಟು ಮಾತಿನ ನಯ ಹಿಡಿತದಲ್ಲಿ ಬಾಳು ನುಚ್ಚು ನೂರು
ಹೂ ಮಾಲೆಯ ಉರುಳಲ್ಲೂ 'ಆತ ಅನಿವಾರ್ಯ'

ಕಾರು, ಬಂಗಲೆ, ಬಂಗಾರ, ವೈಭವದ ಅಟ್ಟಹಾಸ
ಇಡೀ ದಿನ ಮಾಡುವುದೇನೆಂಬ ಯಕ್ಷಪ್ರಶ್ನೆ
ಕ್ಲಬ್ಬು, ಕುಡಿತ, ಕುಣಿತದಲ್ಲೂ ಅರಿಯದ ತುಡಿತ
ಈ ಭೋರ್ಗರೆತದಲ್ಲೂ 'ಆತ ಸಾಮಾಜಿಕ ಒಪ್ಪಂದ'

– ಎಚ್.ಎಸ್.ಮುಕ್ತಾಯಕ್ಕ

## 'ಮೂರು ಮುಖಗಳು'–ಅಸಹಾಯಕತೆಯನ್ನು ದಿಟ್ಟವಾಗಿ ಪ್ರಶ್ನಿಸಿದ ಕವಿತೆ

ಎಚ್.ಎಸ್.ಮುಕ್ತಾಯಕ್ಕ ಅವರ 'ಮೂರು ಮುಖಗಳು' ಸ್ತ್ರೀಸಂವೇದನೆಗಳನ್ನು ದಾಖಲಿಸುವ ಒಂದು ಅದ್ವಿತೀಯ ಪ್ರಯತ್ನದ ಕವಿತೆಯಾಗಿದೆ. ಎಲ್ಲಕ್ಕಿಂತ ಮುಖ್ಯವಾಗಿ ಮೂರೇ ಮೂರು ಪದ್ಯಖಂಡಗಳಲ್ಲಿ ಅದೂ ಮೂರು ಶಬ್ದಗಳನ್ನು ಕೇಂದ್ರಮಾಡಿಕೊಂಡು 'ಕುಟುಂಬ'ವ್ಯವಸ್ಥೆಯನ್ನು ಪ್ರಶ್ನಿಸುವ ಪ್ರಯತ್ನ ಘನ ಗಂಭೀರವಾದುದು. ಪುರುಷ ಪ್ರಧಾನ ಹಿಡಿತದೊಳಗೆ ಒದ್ದಾಡುತ್ತಿರುವ ಕುಟುಂಬ ವ್ಯವಸ್ಥೆ ಹೇಗೆ ರೋಗಗ್ರಸ್ಥವಾಗಿ ಸಾಮಾಜಿಕ ಅಸಮಾನತೆಯನ್ನು ಹುಟ್ಟುಹಾಕಿದೆ ಎಂಬುದನ್ನು ಸಮರ್ಥ ಧಾಟಿಯಲ್ಲಿ ಹೇಳಿದ ಕಾರಣಕ್ಕೆ ಈ ಕವಿತೆ ಶಕ್ತ ಕವಿತೆಗಳಲ್ಲಿ ಒಂದಾಗಿದೆ.

ಕವಿತೆಯ ಮೊದಲ ನಾಲ್ಕು ಸಾಲುಗಳು ಗ್ರಾಮೀಣ ಭಾರತದ ಶ್ರಮ ಸಂಸ್ಕೃತಿಯನ್ನು ಪ್ರತಿನಿಧಿಸುತ್ತದೆ. ಬಡತನ, ಹಸಿವು, ಅನಕ್ಷರತೆ, ಮುಗ್ಧತೆಯೇ ಇಲ್ಲಿ ಮುಖ್ಯವಾಗಿವೆ. ದಿನವಿಡೀ ದಣಿದ ಸಂಪತ್ತು ಕುಡಿತಕ್ಕೆ ವ್ಯಯವಾಗಿ ಗ್ರಾಮೀಣ ಭಾರತದ ಬದುಕು ಹೇಗೆ ಭಗ್ನಗೊಳ್ಳುತ್ತಿದೆ ಎಂಬುದನ್ನು ಹೇಳಿದ್ದಾರೆ. ದಣಿದ ನೋವಿನ ಜೊತೆಯಲ್ಲಿ ಕುಡಿತ ಹೆಂಡತಿಗೆ ಹಿಂಸೆಯನ್ನೊದಗಿಸುವುದಲ್ಲದೆ ಭಾರತದಂಥ ರಾಷ್ಟ್ರಕ್ಕೆ ಜನಸಂಖ್ಯೆಯ ಭಾರವನ್ನೂ ಪರೋಕ್ಷವಾಗಿ ಹೇಗೆ ಹೇರಲು ಕಾರಣವಾಗುತ್ತಿದೆ ಎಂಬುದನ್ನು ದಾಖಲಿಸುತಿದೆ. ಸಂಜೆಯ ಕುಡಿತ ಗಂಡಸಿಗೆ ಒಂದು ಮನರಂಜನೆಯಾದಂತೆ, ಹೆಣ್ಣಿನೊಂದಿಗಿನ ಮೈಥುನವೂ ಒಂದು ಮನರಂಜನೆಯೇ ಆಗಿದೆ. ಹೆಣ್ಣಿಗೆ 'ಕಣ್ಣೀರು' ಅನ್ನವಾಗಿದೆ. ಈಗಾಗಲೇ ನಾಲ್ಕು ಮಕ್ಕಳನ್ನು ಹೆತ್ತ ಹೆಣ್ಣು ಗಂಡನ ಕುಡಿತದ ಪರಿಣಾಮವನ್ನು ಹೇಗೆ ಕೌಟುಂಬಿಕ ಭಾರವನ್ನಾಗಿಸಿಕೊಳ್ಳುವುದು ಅನಿವಾರ್ಯವಾಗಿದೆ ಎಂಬುದೂ ಇಲ್ಲಿನ ಮುಖ್ಯ ಸಂಗತಿಯೇ ಆಗಿದೆ. ಇಲ್ಲಿ ಪುರುಷನ ಸುಖವೇ ಪ್ರಧಾನವಾಗಿರುವ ಕಾರಣ ದಾಂಪತ್ಯವನ್ನು ನಂಬಿಕೊಂಡು ಬಂದ ಹೆಣ್ಣು ಎರಡನೆಯ ದರ್ಜೆಯ ಪ್ರಜೆಯಾಗಿದ್ದಾಳೆ. ಇಲ್ಲಿ ಪುರುಷನಿಗಿಂತ ಸ್ತ್ರೀಯ ನೋವಿನ ನೆಲೆಗಳೇ ಪ್ರಧಾನ ಅಭಿವ್ಯಕ್ತಿಯಾಗಿರುವುದನ್ನು ಗಮನಿಸಬೇಕು. ಏನೆಲ್ಲ ನೋವಿದ್ದರೂ ತನ್ನೊಳಗೇ ಅದುಮಿಟ್ಟುಕೊಂಡು 'ನಿಟ್ಟುಸಿರು'ಬಿಡುವುದೇ ಆಕೆಗೆ ಉಳಿದ ಕೆಲಸವಾಗಿದೆ. ಆ ನಿಟ್ಟುಸಿರನ್ನು ಅರ್ಥಮಾಡಿಕೊಳ್ಳಲು ಸಮಾಜಕ್ಕೆ ಸಾಧ್ಯವಾಗದಿರುವುದೇ ಇಲ್ಲಿನ ವ್ಯಂಗ್ಯ. ಪುರುಷನ ಎಲ್ಲ ಹಿಂಸೆಗಳನ್ನೂ ಸಹಿಸಿಕೊಂಡು ನಮ್ಮ ಸನಾತನ ಸಮಾಜ ಹೇಳಿರುವ, ಹೇರಿರುವ ಅಮಾನವೀಯತೆಯನ್ನೇ 'ಮಾನ' ಎಂದು ನಂಬಿ 'ಆತ ತನ್ನ ದೈವ' ಎಂದು ಆರಾಧಿಸಬೇಕಾಗಿದೆ. ಹೀಗೆ ನಂಬುವ, ನಂಬಿಸುವ ವಾತಾವರಣವನ್ನು ನಮ್ಮ ಸಮಾಜ ಗ್ರಾಮೀಣ ಸಮುದಾಯಗಳಿಗೆ ಉದಾರವಾಗಿ ಕಲಿಸಿಬಿಟ್ಟಿದೆ. ಹೆಣ್ಣು ಇಲ್ಲಿ 'ಗಾಣ'ಕ್ಕೆ ಕಟ್ಟಿದ ಎತ್ತಾಗಿದ್ದಾಳೆ. ಆ ಎತ್ತಿನ ದುಡಿಮೆಗೆ ಬೆಲೆ ಎಷ್ಟು ಎನ್ನುವುದೇ ಈ ಸಮಾಜದ ಅರಿವಿಗೆ ಬರುತ್ತಿಲ್ಲ ಅದೇ ಇಲ್ಲಿನ ವಿಷಾದವಾಗಿದೆ.

ಮಧ್ಯಮ ವರ್ಗದ ಕುಟುಂಬ ಎದುರಿಸುತ್ತಿರುವ ಬಿಕ್ಕಟ್ಟು ಎರಡನೆಯ ಪದ್ಯಖಂಡದಲ್ಲಿ ಅನಾವರಣಗೊಂಡಿದೆ. ಇಲ್ಲಿ ಗಂಡ, ಹೆಂಡತಿ ತಮ್ಮ ಬದುಕಿಗಾಗಿ ಬಿಡುವಿಲ್ಲದೇ ದುಡಿಯುತ್ತಿದ್ದಾರೆ. 'ನಗೆಯ ಮುಸುಕಿನಲ್ಲಿ ಬದುಕೆಲ್ಲ ನಿರ್ವಾತ' ಎಂಬ ಸಾಲು ಇಲ್ಲಿನ ಗಿಲೀಟು ಸಂಸ್ಕೃತಿಯನ್ನು ಹೇಳುತ್ತಿದೆ. ಇಲ್ಲಿರುವ ನಗೆ

ಏನಿದ್ದರೂ ಕೃತಕ 'ನಿಲ್ಲದ ದುಡಿತ'ವೇ ಒಂದು ನಿರ್ವಾತವನ್ನು ಸೃಷ್ಟಿಸಿದೆ. ನಿರ್ವಾತಕ್ಕೆ ಕಾರಣ 'ಗಂಡ, ಮಕ್ಕಳು, ಆಫೀಸು' ಇವುಗಳನ್ನು ಬಿಟ್ಟು ಆಕೆಗೆ ಹೊರಗಿನ ಜಗತ್ತೇ ಇಲ್ಲ. ಮೂರು ಕಡೆ ಆಕೆಯ 'ದುಡಿತ' ಇರುವುದರಿಂದ ಆಕೆ ಇಲ್ಲಿ 'ನಯ ಹಿಡಿತ ದಲ್ಲೇ' ಇರುವ ಅನಿವಾರ್ಯತೆಯನ್ನು ಪುರುಷ ಪ್ರಧಾನ ಸಂಸ್ಕೃತಿ ಸೃಷ್ಟಿಸಿದೆ. ಶಿಕ್ಷಣ, ಹಣ ಇದ್ದರೂ ಇಲ್ಲಿಯೂ ಎರಡನೆಯ ದರ್ಜೆಯ ಪ್ರಜೆಯಾಗಿಯೇ ಬದುಕುತ್ತಿರುವುದನ್ನು ಗಮನಿಸಬೇಕು. ಹೊರ ಜಗತ್ತಿಗೆ ಹೂವಿನಂತೆ ಕಾಣುತ್ತಿರುವ ಬದುಕು 'ಉರುಳಾಗಿದೆ'. ಹಣ, ಶಿಕ್ಷಣವಿದ್ದರೂ 'ನಯ ಹಿಡಿತ'ವೇ ಇಲ್ಲಿ ಎರಡಲಗಿನ ಕತ್ತಿಯಾಗಿದೆ. 'ನಗೆಯ ಮುಸುಕು' ಪರಸ್ಪರ ನಂಬಿಕೆ, ವಿಶ್ವಾಸಗಳನ್ನು ದೂರಮಾಡಿದೆ. ಹೊರ ಜಗತ್ತಿಗೆ ಹೂವಿನಂತೆ ಕಾಣುತ್ತಿರುವ ಬದುಕು ಉರುಳಾಗಿದ್ದರೂ ಆತನಿಲ್ಲದಿದ್ದರೆ ನನಗೆ ಬದುಕು ಎಲ್ಲಿ ಇಲ್ಲವಾಗಿಬಿಡುತ್ತದೋ ಎಂದು 'ಆತ ಅನಿವಾರ್ಯ' ಎಂದು ಒಪ್ಪಿಕೊಳ್ಳಲಾಗಿದೆಯಷ್ಟೇ ಹೊರತು ಪ್ರೀತಿಪೂರ್ವಕ ಒಪ್ಪಿಗೆಯೇನೂ ಇಲ್ಲ. ಆತ ಅನಿವಾರ್ಯವೇ ಹೊರತು ಬದುಕಲ್ಲ. ಈ ಅನಿವಾರ್ಯತೆಯನ್ನು ಹುಟ್ಟುಹಾಕಿದ್ದೂ ಕೂಡ ಇಂಥದ್ದೇ ಪುರುಷ ಪ್ರಧಾನ ಸಂಸ್ಕೃತಿ ಎಂಬುದನ್ನು ಕವಿತೆ ಒತ್ತಿ ಹೇಳುತ್ತಿದೆ.

ಮೂರನೆಯ ಪದ್ಯಖಂಡದಲ್ಲಿ ಶಿಕ್ಷಣ, ಸಂಪತ್ತು, ವೈಭವ ಎಲ್ಲವೂ ಇದೆ. ಇದೆಲ್ಲವೂ ಇರುವುದರಿಂದಲೇ ಇವರಿಗೆ 'ಬದುಕು' ಪ್ರಯಾಸವೆನಿಸಿದೆ. ಕಾಲವನ್ನು ಕೊಲ್ಲಲೆಂದೇ ಕ್ಲಬ್ಬು, ಕುಡಿತ, ಕುಣಿತಗಳಿವೆ. ತೋರಿಕೆಗಾಗಿಯೇ ಬದುಕಿದೆ ಎಂಬ ವೈಭವ ಪ್ರದರ್ಶನದ ಘೋರತೆ ನಿಜವಾದ ಬದುಕನ್ನು ನಾಶಮಾಡಿದೆ. ಬದುಕಲ್ಲೂ ಕೂಡ 'ಒಪ್ಪಂದ'ವಿದೆ. ಕಿತ್ತುಹೋಗುತ್ತಿರುವ ಬದುಕಲ್ಲೂ 'ಪ್ರತಿಷ್ಠೆ', 'ಮನೆತನ' ಎಂಬ ಕಾರಣಕ್ಕೆ ಅನಿವಾರ್ಯವಾಗಿ ಆತನ ಎಲ್ಲ ಕಿರಿಕಿರಿಗಳನ್ನು ಸಹಿಸಿಕೊಳ್ಳುವ ಭೌತಿಕ ಒಪ್ಪಂದವೇ ಇಲ್ಲಿ ಗೆದ್ದಿದೆ. ಗಂಡಿಗೆ ಹೆಣ್ಣು ಅನಿವಾರ್ಯ ಎಂಬುದನ್ನು 'ಸಾಮಾಜಿಕ ಒಪ್ಪಂದ''ವಾಗಿಸಿದೆ. ಅಸಹನೀಯವಾಗಿದ್ದರೂ ಅದನ್ನೇ ಸಹಿಸಿಕೊಂಡು, ಒಪ್ಪಿಕೊಂಡು ಬದುಕಬೇಕಾದ ದುರ್ಗತಿಯನ್ನು ಈ ಸಮಾಜ ಸೃಷ್ಟಿಸಿ ದಮನಕಾರಿ ನೀತಿಯನ್ನು ಹೇರಿದೆ. ಹೀಗೆ ಬದುಕಲೇಬೇಕಾದ ಒತ್ತಾಯವನ್ನೂ ತಂದಿರಿಸಿರುವುದರಿಂದ ಇಲ್ಲಿಯೂ ಹೆಣ್ಣಿನ ಸ್ಥಾನ ದ್ವಿತೀಯ ದರ್ಜೆಯದ್ದೇ ಆಗಿದೆ.

ಈ ಕವಿತೆಯ ಮೂರು ಪದ್ಯಖಂಡಗಳ ಕೊನೆಯ ಸಾಲುಗಳ ಕೊನೆಯಲ್ಲಿ ಬರುವ ಮೂರು ಶಬ್ದಗಳು ಕವಿತೆಯ ಘನಿಷ್ಠ ಪರಿಣಾಮಕ್ಕೆ ಕಾರಣವಾಗಿವೆ. ಆ ಶಬ್ದಗಳೆಂದರೆ 'ಆತ ತನ್ನ ದೈವ', 'ಆತ ಅನಿವಾರ್ಯ', 'ಆತ ಸಾಮಾಜಿಕ ಒಪ್ಪಂದ'. ಈ ಮೂರೂ ಸಾಲುಗಳಲ್ಲಿ 'ಆತ' ಶಬ್ದವಿದೆ. 'ಆತ' ಎಂಬ ಶಬ್ದವನ್ನು ಕವಯಿತ್ರಿ ಬೇಕೆಂದೇ ಬಳಸಿದುದರಿಂದ ಕವಿತೆಗೆ ಸಹಜವಾಗಿಯೇ ಗಟ್ಟಿತನ ಬಂದಿದೆ. ಈ ಮೂರು ಶಬ್ದಗಳನ್ನು ಬರೀ ಗಟ್ಟಿತನ ತರಲಿಕ್ಕಾಗಿಯೇ ಬಳಸಿದ ಪದಗಳೂ ಅಲ್ಲ ಎನ್ನುವುದನ್ನು ಗಮನಿಸಬೇಕು. ಹೆಣ್ಣು ಎಂದರೆ ಪುರುಷ ನಿಯಂತ್ರಣದಲ್ಲಿರಬಹುದಾದ ಒಂದು ಅಮಾಯಕ ಪ್ರಾಣಿ ಎಂದೇ ನಂಬಿದ ಪುರುಷ ಪ್ರಧಾನ ಸಮುದಾಯ ಒಂದು ಅಧೀನ ಸಂಸ್ಕೃತಿಯನ್ನು ನಿರ್ಮಿಸಿ ಹೆಮ್ಮೆಪಟ್ಟುಕೊಂಡಿದೆ. ಪುರುಷನ ಘನತೆಯನ್ನು ಗೌರವಯುತವಾಗಿಯೇ ನಿಲ್ಲಿಸಲು ಪುರುಷ ಪ್ರಧಾನ ಸಮುದಾಯ ಮಾಡಿದ ಬಹು ನಾಜೂಕಿನ ಕುತಂತ್ರವೂ ಇದಾಗಿದೆ ಎಂಬುದನ್ನು ಕವಿತೆ ಹೇಳುತ್ತಿದೆ. 'ಆತ'- ಇಡೀ ಪದ್ಯದ ಕೇಂದ್ರ, ಆತ 'out sider', 'ಅನ್ಯ' ಎಂಬುದನ್ನು ಸ್ಪಷ್ಟವಾಗಿ ಸೂಚಿಸುತ್ತಿದೆ. 'ಆತ' ಎನ್ನುವ ಶಬ್ದ ಬಳಕೆಯು ಈ ಕವಿತೆಗೆ ಒಂದು ವಿಶೇಷ ಆವರಣವನ್ನು ಸೃಷ್ಟಿಸಿದೆ. ಆತ ಕುಟುಂಬದ ಒಳಗಿನವ ಅಲ್ಲವೇ ಅಲ್ಲ ಎಂಬುದನ್ನು ಕವಿತೆ ಧ್ವನಿಸುತ್ತಿದೆ. 'ಆತ' insider ಆಗಲು ಇನ್ನೆಷ್ಟು ಕಾಲ ಬೇಕಾದೀತು ಎಂಬುದನ್ನೂ ಕವಿತೆ ಪ್ರಶ್ನಿಸುತ್ತಿದೆ. ಪುರುಷ ಪ್ರಧಾನತೆ ರಾಜಶಾಹಿ(ಒಡೆತನವನ್ನು)ಯನ್ನೂ ಪ್ರತಿನಿಧಿಸುತ್ತಿದೆ. 'ದೈವ', 'ಅನಿವಾರ್ಯ', 'ಒಪ್ಪಂದ' ಸಮಾಜ ನೀಡಿದ ಕೊಡುಗೆಯನ್ನೇ ಹೇಳುತ್ತಿವೆ. ಈ ಮೂರೂ ಪದಗಳನ್ನು ಸಮಾಜ ಸ್ತ್ರೀಗೆ ಬಲವಂತವಾಗಿ ತೊಡಿಸಿದ ಕಂಕಣಗಳೇ ಆಗಿವೆ. ಈ ಬಂಧನದಿಂದ ಬಿಡುಗಡೆಗೊಳ್ಳಲು ಇನ್ನೆಷ್ಟು ಕಾಲ ಬೇಕಾಗಬಹುದು ಎನ್ನುವುದೇ ಇಲ್ಲಿನ ಮುಖ್ಯ ಪ್ರಶ್ನೆಯಾಗಿದೆ. ಒಟ್ಟಾರೆ ಅಂತ:ಸತ್ವವನ್ನು ಸಾಯಿಸಿಕೊಂಡು ಬದುಕುವ ಅಮಾನವೀಯ ವ್ಯವಸ್ಥೆಯನ್ನು ಕವಿತೆ ಹೇಳುತ್ತಿದೆ. ಇದನ್ನೂ ಪುರುಷ ಪ್ರಧಾನ ಸಮಾಜ ಅರ್ಥಮಾಡಿಕೊಳ್ಳದೆ 'ನನ್ನನ್ನು ಹೊರತುಪಡಿಸಿ ನೀನಿರಲಾರೆ' ಎಂಬ ಧಾರ್ಷ್ಟ್ಯವನ್ನು ಹೊಂದಿ ವಿಜೃಂಭಿಸುವ ಪರಿಪಾಠವನ್ನೂ ಈ ಸಮಾಜ ಹೇಳಿಕೊಟ್ಟಿದೆ. ಪುರುಷ ಅಹಂ ಏನೆಲ್ಲವನ್ನೂ ಮಾಡಿದೆ, ಮಾಡುತ್ತಿದೆ ಎಂಬುದನ್ನು ಹೇಳಲು ಇದಕ್ಕಿಂತ ಬೇರೆಯಾದ ಮೂರು ಪದಗಳಿರಲಾರವು ಎಂಬುದನ್ನೂ ಕೂಡ ಕವಿತೆ ಧ್ವನಿಸುತ್ತಿದೆ. ಸಿಮನ್‌ದಬೋವಾ ಸ್ತ್ರೀವಾದಿ ಚಿಂತನೆಯ ಕೃತಿ 'ದ್ವಿತೀಯ ಲಿಂಗ'

(The Second Sex)ದ ತಾತ್ವಿಕತೆಯ ಪ್ರಭಾವ ಈ ಕವಿತೆಯ ಮೇಲಿದ್ದಂತೆ ತೋರುತ್ತದೆ. ಬೋವಾ ಅವರ ಕೃತಿಯ ಎರಡನೆಯ ಭಾಗದಲ್ಲಿ ಬರುವ 'ಇಂದು ಸ್ತ್ರೀಯ ಬದುಕು' ಹೆಚ್ಚು ಪ್ರಭಾವ ಬೀರಿದಂತಿದೆ. ಬೋವಾ ಹೇಳುವಂತೆ ಅವಳ ಸಾಮಾಜಿಕ ಪರಿಸ್ಥಿತಿಯೇ ಅವಳನ್ನು ಪರಾಧೀನಳನ್ನಾಗಿ ಒಪ್ಪಿಕೊಳ್ಳುವಂತೆ ಮಾಡಿದೆ. ಪುರುಷ ಸ್ತ್ರೀಯನ್ನು ಅನಾದಿಕಾಲದಂದಲೂ 'ಅನ್ಯ'ವಾಗಿಸುತ್ತಲೇ ಬಂದಿದ್ದಾನೆ. ಅವನು ಮಾನವತೆಯ ಸ್ವಯಂಪೂರ್ಣ ಪ್ರತಿನಿಧಿಯೆಂದು ಮಹಿಳೆಯನ್ನು ಒಪ್ಪಿಲ್ಲ. ಮಹಿಳೆಯು ಕೂಡ ಪುರುಷನ ಹುನ್ನಾರವನ್ನು ಅರಿಯದೇ ಪುರುಷನೇ ಮಾನವತೆಯ ಸ್ವಯಂಪೂರ್ಣ ಪ್ರತಿನಿಧಿ ಎಂದು ಒಪ್ಪಿಕೊಳ್ಳುತ್ತ ಬಂದುದರ ಫಲವೇ ಅವಳು 'ಅನ್ಯ'ಳಾಗುತ್ತ ಬಂದು ಪುರುಷನ ನೆರಳಾದಳು. ಈ ನೆರಳು ತನ್ನ ಆಲದ ಬೇರುಗಳನ್ನು ಭದ್ರಪಡಿಸಿಕೊಳ್ಳುತ್ತ ಸ್ತ್ರೀಯ ಎಲ್ಲ ಅವಕಾಶಗಳಿಗೆ ಬಾಗಿಲು ಮುಚ್ಚಿತು. ಬೋವಾ ಅವರ ಸಂಗತಿಗಳನ್ನು ಗಮನದಲ್ಲಿಟ್ಟು ಕೊಂಡು 'ಲೈಂಗಿಕ ರಾಜಕೀಯ' (Sexual politics) ಕೃತಿಯನ್ನು ಕೇಟ್ ಮಿಲೆಟ್ ರಚಿಸಿದ್ದಾಳೆ. 'ಲಿಂಗಭೇದ' ಮತ್ತು 'ಲಿಂಗಪ್ರಜ್ಞೆ'ಯ ಬಗ್ಗೆ ತನ್ನ ಸಿದ್ಧಾಂತವನ್ನು ಮಂಡಿಸುತ್ತ 'ಲಿಂಗಪ್ರಜ್ಞೆ'ಯೇ ಸ್ತ್ರೀಯನ್ನು ತಳಕ್ಕೆ ಒತ್ತಲ್ಪಟ್ಟಿದೆ. ಇದಕ್ಕೆ ಸಾಮಾಜಿಕ, ಧಾರ್ಮಿಕ, ರಾಜಕೀಯ ಕಾರಣಗಳೆ ಪ್ರಧಾನವಾಗಿವೆ ಎನ್ನುತ್ತಾಳೆ. ಈ ಪದ್ಯದಲ್ಲಿ 'ಲಿಂಗಪ್ರಜ್ಞೆ'ಯ ಪಾತ್ರವೇ ಹೆಚ್ಚಿದೆ. ಸ್ತ್ರೀವಿಮೋಚನೆಯ ಆಶಯುವನ್ನು ಆಂತರಂಗಿಕವಾಗಿ ಧ್ಯಾನಿಸುತ್ತ ಪ್ರಬಲ ಚರ್ಚೆಗೆ ಆಹ್ವಾನಿಸಿದ ಕವಿತೆಯಾಗಿದೆ. ಪದ್ಯವನ್ನು ಆದಷ್ಟು ವಾಚ್ಯವಾಗಿ, ಸರಳ ಪದಗಳಲ್ಲಿ, ಕಡಿಮೆ ಸಾಲುಗಳಲ್ಲಿ (12 ಸಾಲುಗಳು) ಪರಿಣಾಮಕಾರಿಯಾಗಿ ಹೇಳಿರುವುದೂ ಕೂಡ ಕವಿತೆಯ ಶಕ್ತಿಯನ್ನು ಹೆಚ್ಚಿಸಿದೆ. ಕವಿತೆ ಬರೆಯಬೇಕು ಎಂದು ಪ್ರಯತ್ನಿಸುವವರಿಗೆ ಇದೊಂದು ಒಳ್ಳೆಯ ಮಾದರಿಯೂ ಆಗಿದೆ.

– ಡಾ. ರಘುರಾಂ ಎ
ಸಹಪ್ರಾಧ್ಯಾಪಕರು, ಕನ್ನಡ ವಿಭಾಗ,
ಸರ್ಕಾರಿ ಪದವಿ ಕಾಲೇಜು
ದಂಡಿನಶಿವರ.



## ಕವಿತೆ ಉಡುಪುಗಳು

ನನ್ನ ಹಲವಾರು ಉಡುಪುಗಳ ಜೊತೆಯಲ್ಲಿ
ನಿನ್ನ ರಂಗು ರಂಗಿನ ವಸ್ತ್ರವನ್ನು ನೇತು ಹಾಕಿದ್ದೇನೆ
ಮನೆಯಲ್ಲಿದ್ದಾಗಲೆಲ್ಲಾ ಅದನ್ನು ಸ್ವಚ್ಛಗೊಳಿಸುತ್ತೇನೆ
ಸ್ವತಃ ನಾನೇ ಇಸ್ತ್ರೀ ಮಾಡಿದರೂ
ಅದರ ಎಲ್ಲಾ ಸುಕ್ಕುಗಳನ್ನು ಸರಿಮಾಡಲಾಗುವುದಿಲ್ಲ
ಹಾಗೂ ಗತದ ನೋವುಗಳ ಕಲೆಗಳನ್ನು
ಸ್ವಚ್ಛಗೊಳಿಸಲಾಗುವುದಿಲ್ಲ
ಸಂಬಂಧಗಳು ಉಡುಪುಗಳಂತಿದ್ದರೆ ಎಷ್ಟು
ಸರಳವಾಗಿರುತ್ತಿತ್ತು ನಮ್ಮ ಜೀವನ
ಅವುಗಳನ್ನು ನಮ್ಮ ಅಂಗಿಗಳಂತೆ ಬದಲಿಸಬಹುದಿತ್ತು

ಗುಲ್ಜಾರ್...

ಕನ್ನಡಕ್ಕೆ :
**ಕಾಂತರಾಜು ಕೆ.**



## ಅನುವಾದ : ಸಂಸ್ಕೃತಿ ಅಧ್ಯಯನ ದಿಂದ ಸಂಸ್ಕೃತಿಯ ವಿಮರ್ಶೆಯೆಡೆಗೆ...?

{ಪ್ರೊ ಕ್ಯಾಥರಿನ್ ಬೆಲ್ಸೆ ಅವರ ಅಧ್ಯಯನ ಕ್ಷೇತ್ರವು ಮುಖ್ಯವಾಗಿ ರಚನೋತ್ತರ ಸಿದ್ಧಾಂತವನ್ನು ಸಂಸ್ಕೃತಿ ಇತಿಹಾಸ ಮತ್ತು ವಿಮರ್ಶೆಗೆ ಅನ್ವಯಿಸಿ ನೋಡುವುದಾಗಿದೆ. ಅವರ ಪ್ರಮುಖ ಕೃತಿಗಳಲ್ಲಿ ಮುಖ್ಯವಾದವು, ***Critical Practice (1980), Desire: Love Stories in Western Culture (1994) and Shakespeare and the Loss of Eden: The Construction of Family Values in Early Modern Culture (1999) Culture and the Real(2005),*** ಮತ್ತು ***A Future for Criticism (2011).*** ಕ್ಯಾಥರಿನ್ ಬೆಲ್ಸೆ ಅವರು ಮಾನವರು ಮತ್ತು ಸಂಸ್ಕೃತಿ ನಡುವಿನ ಸಂಬಂಧಗಳನ್ನು ಕುರಿತು ಚರ್ಚೆ, ವಿಮರ್ಶೆ ಮಾಡುವ 'ವಿಮರ್ಶೆ ಮತ್ತು ಸಂಸ್ಕೃತಿ ಸಿದ್ಧಾಂತ' ಸಂಶೋಧನಾ ಕೂಟದ ಅಧ್ಯಕ್ಷರಾಗಿ ಕಾರ್ಯ ನಿರ್ವಹಿಸುತ್ತಿರುತ್ತಾರೆ.

ಪ್ರೊ ಕ್ಯಾಥರಿನ್ ಬೆಲ್ಸೆ ಅವರ ದೃಷ್ಟಿಯಲ್ಲಿ ವಿಮರ್ಶಕರೆಂದರೆ ಕೇವಲ ಇತಿಹಾಸಕಾರರಲ್ಲ. ಅಕ್ಷರ ರೂಪಿತ ಪಠ್ಯಗಳನ್ನಷ್ಟೇ ಅವರು ಅನ್ವೇಷಿಸಬಾರದು. ಬದಲಾಗಿ ಚಿತ್ರಗಳು, ಭಾವಚಿತ್ರಗಳು, ಸ್ಥಾವರಗಳು, ಆಚರಣೆ, ನಾಟ್ಯಪ್ರದರ್ಶನ, ಗಗನಚುಂಬಿ ಕಟ್ಟಡಗಳು, ಮತ್ತು ಪ್ರತಿನಿತ್ಯ ಜೀವನದ ಎಲ್ಲಾ ವಸ್ತುಗಳು ವಿಮರ್ಶೆಯ ಪರಿಧಿಯೊಳಗೆ ಬರುತ್ತವೆ. ಸಂಸ್ಕೃತಿ ವಿಮರ್ಶೆಯು ಮೌಖಿಕ ಮತ್ತು ದೃಶ್ಯ ಮಾಧ್ಯಮವನ್ನು ಓದುವ ಕೌಶಲ್ಯ ಬೆಳೆಸಿಕೊಳ್ಳಲು ಸಹಕಾರಿಯಾಗಿದೆ. ಆಕೆಯ ಪ್ರಕಾರ ಜನಪ್ರಿಯ, ಸಮಕಾಲೀನ ಸಂಸ್ಕೃತಿಯನ್ನು ಉಚ್ಚ ಮತ್ತು ಗತ ಸಂಸ್ಕೃತಿಯಿಂದ ಪ್ರತ್ಯೇಕಗೊಳಿಸುವುದರ ಹಿಂದೆ ಐತಿಹಾಸಿಕ ಮತ್ತು ಸಾಂಸ್ಥಿಕ ಕಾರಣಗಳಿವೆ. ಸಂಸ್ಕೃತಿ ವಿಮರ್ಶೆ ಒಂದು ಕೌಶಲ್ಯ ಮತ್ತು ಬೌದ್ಧಿಕ ಕಸರತ್ತು, ಅದರ ಶಕ್ತಿಯಿರುವುದೇ ಸೂಚಕಗಳನ್ನು (***Signifier***) ಬಹು ದೃಷ್ಟಿಯಿಂದ ಅನ್ವೇಷಿಸುವುದು. ***Catherine Belsey*** ಅವರು ***Paul Bowman*** ಜೊತೆ ನಡೆಸಿದ ಸಂದರ್ಶನದ ಅನುವಾದ ಈ ಲೇಖನ.}

**ಪಶ್ನೆ:** ಸಂಸ್ಕೃತಿ ಅಧ್ಯಯನದ ನೆಲೆಗಟ್ಟಿನಲ್ಲಿ ತಮ್ಮ ಮತ್ತು ತಮ್ಮ ಕೃತಿಗಳ ಇರುವು ಯಾವ ಸಂಬಂದದ್ದು? ಸಂಸ್ಕೃತಿ ಅಧ್ಯಯನವೆಂಬ ಪರಿಕಲ್ಪನೆಯು ಸಮಕಾಲೀನ ಸನ್ನಿವೇಶದಲ್ಲಿ ತನ್ನ ಶಾಸನಾಧಿಕಾರವನ್ನು ಇನ್ನೂ ಉಳಿಸಿಕೊಂಡಿದೆಯೇ?

**ಉತ್ತರ:** ಮೊದಲನೆಯದಾಗಿ ನಾನು ಸ್ಪಷ್ಟಪಡಿಸುವುದೇನೆಂದರೆ, ನಿಮ್ಮ ಪ್ರಶ್ನೆಗಳನ್ನು ನಾನು ಸಂಸ್ಕೃತಿ ಅಧ್ಯಯನದ ಹೊರಗೆ ನಿಂತು ಉದ್ದೇಶಿಸುತ್ತೇನೆ. ಸಂಸ್ಕೃತಿ ಅಧ್ಯಯನದಿಂದ ನಾನು ಬಹಳಷ್ಟು ಕಲಿತಿದ್ದೇನೆ, ಆದರೆ ಅದರ ಪರಿಮಿತಿಗಳೂ ಸಹ ನನ್ನ ಅರಿವಿಗೆ ಬಂದಿದೆ. ಮಿತಿ ಎಂಬ ಪದ ಅತಿಯಾಯಿತೇ ನೋ, ನನ್ನ ಅಸಮಾಧಾನವಿರುವುದು ಸಂಸ್ಕೃತಿ ಅಧ್ಯಯನ ಏನು ಮಾಡುತ್ತದೆ ಎಂಬುದರ ಬಗ್ಗೆ ಅಲ್ಲ, ಬದಲಾಗಿ ಯಾವ ಕ್ಷೇತ್ರಗಳನ್ನು ಅದು ಅಲಕ್ಷಿಸುತ್ತಿದೆ ಎಂಬುದರಲ್ಲಿ. ಹಾಗಾಗಿಯೇ ಇಂದು ಅನೇಕ ಸಂಸ್ಕೃತಿ ಅಧ್ಯಯನ ವಿಭಾಗಗಳಲ್ಲಿ ಕಂಡು ಬರುತ್ತಿರುವ ವಿಷಯ ವ್ಯಾಪ್ತಿಗಿಂತ ವಿಸ್ತಾರವಾದ ಹರವನ್ನು ಹೊಂದಿರುವ ಪರ್ಯಾಯವಾದ ಸಂಸ್ಕೃತಿ ವಿಮರ್ಶೆಯನ್ನು, ಅಭಿವೃದ್ಧಿ ಪಡಿಸುವುದು ನನಗೆ ಆಸಕ್ತಿಯ ವಿಷಯ. ನಿರ್ದಿಷ್ಟವಾಗಿ ಈ ಬದಲಾವಣೆ ಅಥವಾ ಮಾರ್ಪಾಡ ನ್ನು ಬಯಸುವ ಮುಖ್ಯ ಉದ್ದೇಶವೇನೆಂದರೆ, ಸಧ್ಯದಲ್ಲಿ ಪ್ರಚಲಿತವಿರುವ ಸಂಸ್ಕೃತಿ ಅಧ್ಯಯನವು ಅದರ ಬಾಲ್ಯ ಅವಸ್ಥೆಯಲ್ಲಿ ಹೇಗಿತ್ತೋ ಹಾಗೆಯೇ ಇದೆ. ಒಂದು ಕಾಲದ ಅದರ ಶಕ್ತಿ ಇಂದು ಅದರ ಮಿತಿಯಾಗಿದೆ. ಜನಪ್ರಿಯವಾಗಬೇಕೆಂಬುದು ಅದರ ಅವಶ್ಯಕ ಪ್ರವೃತ್ತಿ ಆದರೆ populism ಹಂತಕ್ಕೆ ಬಂದು ಅದು ನೆಲೆಗೊಂಡರೆ ಅದು ದುರಂತ. ಯಾಕೆಂದರೆ populism[1] ಸುಲಭವಾಗಿ ಸಂಪ್ರದಾಯಿ ದೋರಣೆಗಳನ್ನು (Conservatism)[2] ಮೈಗೂಡಿಸಿ ಕೊಳ್ಳುವಂತಹದ್ದು.

**ಪ್ರಶ್ನೆ:** ಸಂಸ್ಕೃತಿ ಅಧ್ಯಯನವು ರಾಜಕೀಯ ಪರಿಕಲ್ಪನೆ. ಸಂಸ್ಕೃತಿ ಅಧ್ಯಯನದ ರಾಜಕೀಯಗಳೇನು? ನಿಮ್ಮ ಕೃತಿಗಳ ರಾಜಕಾರಣ ಅಥವಾ ರಾಜಕೀಯ ಮಹತ್ವಗಳೇನು?

**ಉತ್ತರ:** ಸಂಸ್ಕೃತಿ ಅಧ್ಯಯನಗಳು ಕ್ರಮೇಣ populism ಕಡೆಗೆ ಸರಿಯುತ್ತವೆ ಎಂಬುದಕ್ಕೆ ಐತಿಹಾಸಿಕ ಸಮರ್ಥನೆಗಳಿವೆ, ಇವು ಸಂಸ್ಕೃತಿ ಅಧ್ಯಯನಗಳನ್ನು ದಾರಿ ತಪ್ಪಿಸಿವೆ. ಈ ಕುರಿತ ಚರ್ಚೆಗಳು ಪರಿಚಿತವಾಗಿದ್ದರೂ, ಹೇಗೆ ಜನಪ್ರಿಯವಾದ ಅದ್ದರಿಂದಲೇ ವಿಮೋಚನೆಯ ಸಾಧ್ಯತೆಗಳಿದ್ದ ಪ್ರೇರಣೆಯು populist ಮಿತಿಗೆ ಜಾರಬಹುದು ಎಂಬುದನ್ನು ಅರಿಯಲು ಮತ್ತೆ ಮತ್ತೆ ಚಿಂತಿಸಬೇಕಾಗುತ್ತದೆ.

1950ರ ಹೊತ್ತಿಗೆ ಸಂಸ್ಕೃತಿ ಅಧ್ಯಯನದ ಆದ್ಯ ಪ್ರವರ್ತಕರಲ್ಲಿ ಪ್ರಮುಖರಾದ ರೇಮಂಡ್

ವಿಲ್ಲಿಯಮ್ಸ್ ಮತ್ತು ರಿಚರ್ಡ್‌ಹೋಗಾರ್ಟ್, ಇಂಗ್ಲೀಷ್ ಅಧ್ಯಯನಗಳನ್ನು ಸಂಶಯದಿಂದ ನೋಡುತ್ತಿದ್ದುರಲ್ಲಿ ಕಾರಣವಿತ್ತು. ಇಂಗ್ಲೀಷ್ ವಿರ್ಮಶಕರು ಮೌಲ್ಯ ಪರಿಶೀಲನೆಗೆ ಹೆಚ್ಚು ಮಹತ್ವ ನೀಡುತ್ತಿದ್ದರು. ವರ್ಗೀಕರಣವೇ ಅವರ ಮುಖ್ಯ ಧ್ಯೇಯವಾಗಿತ್ತು. ಕಾದಂಬರಿಕಾರರಲ್ಲಿ ಎಫ್.ಆರ್.ಲೀವಿಸ್, ಡಿ.ಹೆಚ್.ಲಾರೆನ್ಸ್, ಡಿಕ್ಕಿನ್ಸ್ ಅಥವಾ ಹಾರ್ಡಿ ಇವರಲ್ಲಿ ಯಾರು ಹೆಚ್ಚು ಜನಪ್ರಿಯ ಎಂಬ ಚರ್ಚೆ ನಡೆದಿತ್ತು, ಆದರೆ ಕಾವ್ಯದಲ್ಲಿ ಲಿವಿಸ್ ಮತ್ತು ಈಲಿಯೆಟ್ ಇಬ್ಬರೂ ಡನ್ ಕವಿಯನ್ನು ಹೆಚ್ಚು ಜನಪ್ರಿಯವೆನ್ನುತ್ತಾರೆ ಆದರೆ ಅವರ ದೃಷ್ಟಿಯಲ್ಲಿ ಮಿಲ್ಟನ್ ಜನಪ್ರಿಯ ಕವಿಯಲ್ಲ ಯಾಕೆಂದರೆ ಆತ ಇಂಗ್ಲೀಷ್ ನ ಜನಪ್ರಿಯ ಸ್ಥಳಿಯ ಲಯಕ್ಕೆ ಲ್ಯಾಟೀನ್ ಅಂಶವನ್ನು ಸೇರಿಸಿದ್ದರಿಂದು ಆತ ಒಂದು bad influence. ಈ ಮೌಲ್ಯ ನಿರ್ಣಯಗಳು ಸತತವಾಗಿದ್ದರೂ ಜನಪ್ರಿಯವಾಗಿದ್ದುದರ ಬಗ್ಗೆ ಅವರ ಧೋರಣೆಗಳು ಅನಿಶ್ಚಿತ; ಗತ ಸಂಸ್ಕೃತಿಗಳ ಬಗ್ಗೆ ಅವರ ಧೋರಣೆಗಳು ಸಕಾರಾತ್ಮಕವಾಗಿದ್ದವು ಆದರೆ ವಾಸ್ತವ ಸಂಸ್ಕೃತಿಗಳನ್ನು ತೀವ್ರ ಗುಮಾನಿಯಿಂದ ನೋಡಲಾಗುತ್ತಿತ್ತು.

ಇದೇ ಕಾಲಕ್ಕೆ ಉಚ್ಛ ಸಂಸ್ಕೃತಿಯಿಂದ ಮಾತ್ರವೇ ನಾಗರೀಕತೆಗಳ ಉಳಿವು ಸಾಧ್ಯ ಎಂಬುದನ್ನು ಈಲಿಯೆಟ್ ಸಮರ್ಥಿಸುತ್ತಿದದ್ದು ಮತ್ತೆ ಮ್ಯಾಥ್ಯು ಆರ್ನಾಲ್ಡ್ ನ ಕಲ್ಚರ್ ಮತ್ತು ಅರಾಜಕತೆ ಕೃತಿಯನ್ನು ಮೊದಲಿನಿಂದ ಓದಿದಂತಾಗುತ್ತಿತ್ತು. ಆದರೆ ಕಲ್ಚರ್ ಮತ್ತು ಅನಾರ್ಕಿ ಕೃತಿಯಲ್ಲಿ ಕಂಡು ಬರುವ ಲಿಬರಲ್ ಆದರ್ಶಗಳನ್ನು ಈಲಿಯಟ್ ನಲ್ಲಿ ಕಾಣುವುದು ಸಾಧ್ಯವಾಗದೇ ಹೋಯಿತು. ಇದೇ ಸಮಯಕ್ಕೆ ಅಮೇರಿಕನ್ ವಿಮರ್ಶಕರು ಮೌಲ್ಯಗಳ ಶ್ರೇಣೀಕರಣ ನಿರ್ಣಯಗಳ ವಿಮರ್ಶೆಯ ಗೊಂದಲದಿಂದ ಹೊರಬಂದು ಪಠ್ಯ ಕೇಂದ್ರಿತ ವಿಮರ್ಶೆಯ ಕುರಿತು ಗಮನಿಸುತ್ತಿದ್ದರು. ಇನ್ನೂ ವಿದ್ಯಾರ್ಥಿಗಳಾಗಿದ್ದ ನಾವು ನಮ್ಮ ಅಸ್ತಿತ್ವಕ್ಕಾಗಿ ನವವಿಮರ್ಶೆಯ ಕಡೆಗೆ ತಿರುಗಿದೆವು. ಈ ಹೊಸ ವಿಮರ್ಶೆಯು ಹೆಚ್ಚಿನ ಬೌದ್ಧಿಕತೆಯಿಂದ ಆಶ್ಚರ್ಯಗೊಳಿಸಿದರೂ, radically a-historical ಆಗಿದ್ದರೂ ಸಹ 'ಸೋಲು', 'ಗೆಲುವಿನ' ಪರಿಭಾಷೆಗೆ ಅಂಟಿಕೊಂಡಿರುವುದನ್ನು ಗಮನಿಸಬಹುದು.

ಸಮತೂಕವನ್ನು ಕಾಯ್ದುಕೊಂಡ, ಮಾನವೀಯವಾದ ಮತ್ತು ರಾಜಕೀಯವಾಗಿ ಬದ್ಧತೆ ಇರದ ಪದ್ಯವೊಂದು ಯಶಸ್ವೀ ಪದ್ಯವೆನ್ನಿಸಿಕೊಳ್ಳುವು ದು ಸಹಜವಾಗಿತ್ತು. ಒಬ್ಬ ವಿದ್ಯಾರ್ಥಿಯಾಗಿ ಪ್ರಾಚೀನ ಇತಿಹಾಸಜ್ಞ ಸಿ.ಎಸ್.ಲೀವಿಸ್ ನ ಕೃತಿಗಳ ವ್ಯರ್ಥ ಓದನ್ನು ಮಾಡಿದ ನೆನಪಿದೆ. ಲೀವಿಸ್ ಅದ್ಭುತ ಕಾಲಕಳೆದಂತೆ ಅವನ ತಿಳುವಳಿಕೆಯ ಬಗ್ಗೆ ಇದ್ದ ಗೌರವ ಹೆಚ್ಚಾಯಿತು. ಕ್ರಮೇಣವಾಗಿ ತೆರೆದು ಕೊಳ್ಳುವ ಪ್ರಾಚೀನ ಮತ್ತು ಆಧುನಿಕ ಸಂಸ್ಕೃತಿಯ ಕತೆಗಳನ್ನು ಆತ ಹೇಳುತ್ತಾನೆ. ಆದರೆ ಲೀವಿಸ್ ಕೂಡ ಮೌಲ್ಯಯುತ ನಿರ್ಣಯಗಳಿಗೆ ಅಂಟಿಕೊಂಡವನು, ಅವನ ಕತೆಗಳ ಸುಖಾಂತ ಗಳೆಲ್ಲವೂ ಆಂಗ್ಲಿಕನ್ ಚರ್ಚ್‌ನ ಸ್ಥಾಪನೆಯೊಂದಿಗೆ ಮುಗಿಯುವಂತಹವು. ಸಂಸ್ಕೃತಿ ಇತಿಹಾಸದಲ್ಲಿ ಆಸಕ್ತಿ ಇದ್ದ E.M.W Tillyard ಇಂಗ್ಲೆಂಡ್ ತನ್ನ ಸುವರ್ಣ ಯುಗದಲ್ಲಿ ಉತ್ತಮ ಕೃತಿಗಳನ್ನು ನೀಡಿತ್ತು ಎಂದು ನಿರ್ಣಾಯಕವಾಗಿ ಘೋಷಿಸುತ್ತಾನೆಯೇ ಹೊರತು ಸಾಮಾಜಿಕ ಚಲನೆಯನ್ನಾಗಲೀ ಪ್ರಭುತ್ವವನ್ನಾಗಲೀ, ಸುಖೀ ರಾಜ್ಯ ಕಲ್ಪನೆಯನ್ನಾಗಲೀ ಪ್ರಶ್ನಿಸಲಾರ.

ಎರಡನೇ ಮಹಾಯುದ್ಧವು ಅಲ್ಲಿಯವರೆಗೂ ಒಪ್ಪಿಕೊಂಡು ಅನುಸರಿಸಲ್ಪಟ್ಟ ಎಲ್ಲಾ ತರಹದ ಸಾಮಾಜಿಕ ಶ್ರೇಣಿಗಳನ್ನು ಪ್ರಶ್ನಿಸಿತು. ಸಾಮಾನ್ಯ ಸೈನಿಕನಿಗೂ ಯುದ್ಧಕಾರಣದಿಂದ ತನ್ನ ಮೇಲಧಿಕಾರಿ ಅನುಭವಿಸುತ್ತಿದ್ದ ಒತ್ತಡವನ್ನು ತುಂಬಾ ಹತ್ತಿರದಿಂದ ನೋಡಲು ಸಾಧ್ಯವಾಗಿತ್ತು. ಬಿಬಿಸಿ ಕೂಡ ಪ್ರಾಂತೀಯ ಧ್ವನಿಗಳನ್ನು ಗುರುತಿಸುತ್ತಿತ್ತು. ಅದು ಬದಲಾವಣೆಯ ಕಾಲ. ವಯಸ್ಕರ ಶಿಕ್ಷಣದ ಹಿನ್ನಲೆಯಲ್ಲಿ ತೀವ್ರ ಆಯ್ಕೆಯ ಯುನಿವರ್ಸಿಟಿ ವ್ಯವಸ್ಥೆಯ ಪರಿಧಿಯಲ್ಲಿ, ಮಾರ್ಕ್ಸವಾದಿ ಇತಿಹಾಸಜ್ಞ ಇ.ಪಿ.ಥಾಮ್ಸನ್ ನ ಬೆಂಬಲದಲ್ಲಿ ಬರೆಯುತ್ತಿದ್ದ ವಿಲ್ಲಿಯಮ್ಸ್ ಮತ್ತು ಹೊರ್ಗಾಟ್ ಇಲ್ಲಿಯವರೆವಿಗೂ ಹೂತು ಹೋಗಿದ್ದಂತ ಜನಪ್ರಿಯ ಸಂಸ್ಕೃತಿಯನ್ನು ಕುರಿತು ಸಾಮಾನ್ಯರಾದ ಬಹುಜನರಿಗೆ ತಲುಪುವಂತೆ ಬರೆಯುತ್ತಿದ್ದರು. ಥಾಮ್ಸನ್ ನ 'The Making of the English Working Class'(1963), ಹೋರ್ಗಾಟ್ ನ 'The Uses of Literacy'(1957), ರೇಮಂಡ್ ವಿಲ್ಲಿಯಂ ನ 'Culture and Society'(1958) ಮತ್ತು 'The Long Revolution'(1961) ಪ್ರಕಟವಾದವು. ಸಂಸ್ಕೃತಿ ಅಧ್ಯಯನದ ಈ ಹೊಸ ಶಿಸ್ತು ಶ್ರಮಿಕವರ್ಗವನ್ನು ಮುನ್ನಲೆಗೆ ತಂದಿತು. ಬರಹದ ಪಠ್ಯಗಳಿಗಿಂತ ಮೌಖಿಕ ಮತ್ತು ಸಂಗೀತ ಪರಂಪರೆಗೆ ಆದರ ಸಿಕ್ಕಿತು. ಸಾಂಪ್ರದಾಯಿಕ ಅಕಾಡೆಮಿಕ್

ಶಿಸ್ತುಗಳಲ್ಲಿ ಕಾಣದ ತೆರೆದುಕೊಳ್ಳುವಿಕೆ ಈ ಹೊಸ ಅಧ್ಯಯನ ಸಾಧ್ಯವಾಗಿಸಿತು. ಹೊಸ ತರಹದ ವಿಧಾನಗಳು, ಅನುಸಂಧಾನಗಳು, ಓದುಗಳು ಸಾಧ್ಯವಾದವು. ಇಂಗ್ಲೀಷ್ ಅನುವಾದದ ರೋಲಾಂಡ್ ಬಾರ್ತ ನ ಕಲ್ಚರಲ್ ಮಿಥ್ಸ್ ಮತ್ತು ಆಲ್ಥೂಸರ್ ನ ಐಡಿಯಾಲಜಿ ಪರಿಕಲ್ಪನೆಗಳನ್ನು ಚಿಂತಕರು ತಬ್ಬಿಹಿಡಿದರು. ಒಂದು ದಶಕದ ಅವಧಿಯಲ್ಲಿ ದೃಶ್ಯ ಮಾಧ್ಯಮ ಸಿದ್ಧಾಂತಗಳು ತೀವ್ರವಾದ ಬದಲಾವಣೆಗಳನ್ನು ಕಂಡಿತು.

ಸಂಸ್ಕೃತಿ ಅಧ್ಯಯನವು ಮಾನವೀಯ ವಿಭಾಗಗಳ ಪ್ರತಿಯೊಂದು ಆಯಾಮವನ್ನು ಪ್ರಭಾವಿಸಿತು. ಒಂದಾದರ ಮೇಲೆ ಒಂದರಂತೆ, ಇತಿಹಾಸ, ಕಲಾ ಇತಿಹಾಸ, ಕ್ಲಾಸಿಕ್ಸ್, ಇಂಗ್ಲೀಷ್ ಪ್ರತಿಯೊಂದು ಸಂಸ್ಕೃತಿ ಅಧ್ಯಯನದ ಬೆಳಕಲ್ಲಿ ನವೀನತೆಯನ್ನು ಪಡೆದವು. ಹಾಗೆಯೇ ಮಾನವ ಶಾಸ್ತ್ರ, ಸ್ತ್ರೀವಾದ, ಸಮಾಜವಾದಗಳೂ ಸಹ.

ಆದರೆ.....................

ಸಂಸ್ಕೃತಿ ಅಧ್ಯಯನವು ಕೋರ್ಸಗಳು, ಪರೀಕ್ಷೆಗಳು, ಪ್ರಕಟಣೆಗಾಗಿಯೇ ಹಪಹಪಿಸುವ ಬರಹಗಳು, ಇಂತಹ ಅಕಾಡೆಮಿಕ್ ಸಾಂಸ್ಥೀಕರಣದ ಮರ್ಯಾದೆಗಳಿಂದ ಅದರ ನೈಜ ಜವಾಬ್ದಾರಿಯಿಂದ ವಿಮುಖವಾಗುತ್ತಿದೆ. ಹೊಸ ತರಹದ ಅನ್ವೇಷಣೆಗಳಿಂದ ಹೊಸ ವಿಷಯಗಳು ತಿಳಿದವು, ದಾಖಲಾದವು, ಅಲ್ಪಸಂಖ್ಯಾತ ಸಂಸ್ಕೃತಿಗಳು, ಮಾನವ ಕುಲಗಳ ಗುರುತಿಸಲ್ಪಟ್ಟವು; ಲೈಂಗಿಕತೆಯ ಮತ್ತು ಕುಲಗಳ ಬಗ್ಗೆ ಇದ್ದ ಫೋಭಿಯಾಗಳು ದೂರವಾದವು. ಇದೆಲ್ಲಾ ಸ್ವಾಗತಾರ್ಹವೇ. ಆದರೆ ಕೇವಲ ಹೊಸತನವೇ ಯಶಸ್ಸು ಅಲ್ಲವಲ್ಲ. ಹಳೇ ಪೀಳಿಗೆಯ ಅರ್ಹತೆಯನ್ನು ಹೊಸ ಪೀಳಿಗೆ ನಿರ್ಧರಿಸುತ್ತದೆ. ಸಂಸ್ಥೀಕರಣ ಇದನ್ನೆಲ್ಲಾ ನಿಧಾನವಾಗಿಸುತ್ತದೆ.

ಜನರ ನಡುವಿನಿಂದ ಹುಟ್ಟಿ ಬಂದ ಸಂಸ್ಕೃತಿ ಅಧ್ಯಯನವು ಸಿದ್ಧಾಂತದ ಬಿಗಿಬಂಧಕ್ಕೆ ಹೆಚ್ಚು ಹೆಚ್ಚು ಸಿಕ್ಕಿಕೊಂಡಂತೆಲ್ಲಾ ತನ್ನ ಹುಟ್ಟಿನ ಬಗ್ಗೆ ಅನ್ಯಮನಸ್ಕತೆಯನ್ನು ತೋರತೊಡಗಿದೆ. 1980ರ ನಂತರ "ಸ್ಕ್ರೀನ್" ಸಿನಿಮಾ ತನ್ನ ಸೈದ್ಧಾಂತಿಕ ತೀಕ್ಷ್ಣತೆಯನ್ನು ಕಳೆದುಕೊಂಡಿದೆ.

ಇ.ಪಿ.ಥಾಮ್ಸನ್ ಆಲ್ಥೂಸರ್‌ನ ಮಾರ್ಕ್ಸ ವಾದವನ್ನು ದೂಷಿಸುತ್ತಿದ್ದಾನೆ, ತನ್ನನ್ನು ಪ್ರಸಿದ್ಧನನ್ನಾಗಿ ಮಾಡಿದ ಫ್ರೆಂಚ್ ಸಿದ್ಧಾಂತವನ್ನು ಟೆರ್ರಿ ಈಗಲ್ಟನ್ ನಿರಾಕರಿಸುತ್ತಿದ್ದಾನೆ. ಕಾಮನ್ ಸೆನ್ಸ್ ಮತ್ತು ಅನುಭವ ಮುಂಚೂಣಿಗೆ ಬರುತ್ತಿವೆ, ಗ್ರಾಮ್ಸಿ ತುಂಬಾ ಹಿಂದೆ ಸ್ಪಷ್ಟ ಪಡಿಸಿದ ಹಾಗೆ, ಈ ಕ್ಷೇತ್ರಗಳು ಐಡಿಯಾಲಜಿಯ ಅಂತಿಮ ಕೊತ್ತಲಗಳು, ಸತ್ಯವನ್ನು ಖಾತರಿಪಡಿಸುವ ಅಂಶಗಳಲ್ಲ. ಅದರಿಂದಾಗುವುದೇನು? ಸಿದ್ಧಾಂತಗಳನ್ನು ಪ್ರತಿರೋಧಿಸುವ ಚಳುವಳಿ ಗಳಿಗೆ ಮೊದಲ ಬಲಿಪಶು Psychoanalysis & Deconstruction. ಈ ಚರ್ಚೆಯಲ್ಲಿ ಅನೇಕ ಬಾರಿ ಭಾಗವಹಿಸಿರುವ ನಾನು ಒಪ್ಪುವುದೇನೆಂದರೆ ಈ ಸೈದ್ಧಾಂತಿಕ ತಿಳುವಳಿಕೆಗಳು ಮುಷ್ಕರಗಳ ಸಮಯದಲ್ಲಿ ಯಾವುದೇ ಅನುಕೂಲಕ್ಕೆ ಬರಲಾರವು; ತಮ್ಮ ವರ್ಗ ಸಿದ್ಧಾಂತವನ್ನು ಸಮರ್ಥಿಸಲು ಸನ್ನದ್ಧರಾಗಿರುವ ಶ್ರಮಿಕವರ್ಗಕ್ಕಾಗಲೀ, ಪಿತೃಪ್ರಧಾನ ವ್ಯವಸ್ಥೆಗೆ ಬಲಿಪಶುವಾದ ಅತ್ಯಾಚಾರಕ್ಕೆ ಒಳಗಾದವರಿಗಾಗಲೀ ಈ ಸಿದ್ಧಾಂತಗಳು ಯಾವ ಸಹಾಯ ಒದಗಿಸಬಲ್ಲವು? ಆದರೆ ಸಂಸ್ಕೃತಿ ಅಧ್ಯಯನಕ್ಕೆ ಧೀರ್ಘ ಕಾಲದ ಅಜೆಂಡಾ ಇದೆ. ನಮ್ಮನ್ನು ರೂಪಿಸಿರುವ ಸಂಸ್ಕೃತಿಯನ್ನು ಅರ್ಥಮಾಡಿಕೊಳ್ಳಲು ಎಲ್ಲಾ ತರಹದ ಕೌಶಲ್ಯಗಳನ್ನೂ ನಾವು ಬಳಸಿಕೊಳ್ಳಬೇಕು. ಬಂಡವಾಳಶಾಹಿಯ ಉದ್ದೇಶಗಳು ಪಾರದರ್ಶಕವಾಗಿ, ಸ್ಪಷ್ಟವಾಗಿದ್ದರೆ ಅಥವಾ ಕೇವಲ ಆರ್ಥಿಕತೆಗೆ ಮಾತ್ರವೇ ಸಂಬಂಧಿಸಿದ್ದರೆ, ಪೂರ್ವಕ್ಕಾಗಲೀ, ಪಶ್ಚಿಮಕ್ಕಾಗಲೀ ಇಷ್ಟು ಹತ್ತಿರವಾಗುವುದು ಸಾಧ್ಯವಿರಲಿಲ್ಲ. ಸಂಸ್ಕೃತಿಯು ತನ್ನ ವ್ಯಾಪ್ತಿಯಲ್ಲಿ ಸಂಚರಿಸುವ ಮನುಷ್ಯರನ್ನು ಕಂಡೀಷನ್ ಗೆ ಒಳಪಟ್ಟ ರೋಬೋಟ್ ಗಳಂತೆ ನೋಡುವುದಿಲ್ಲ, ಬದಲಾಗಿ ಸಂಕೀರ್ಣವಾದ, ಕ್ಲಿಷ್ಟ ಬಹುಪ್ರಕಾರದ ವ್ಯಕ್ತಿಗಳಂತೆ ಕಾಣುತ್ತದೆ. Psychoanalysis & Deconstruction ಎರಡೂ ಕೂಡ ಸಂಸ್ಕೃತಿಯು 'ಪಠ್ಯ' ವೆಂಬ ಪರಿಧಿಗೆ ಒಳಪಟ್ಟಾಗ ಆಗುವ ಸೂಕ್ಷ್ಮ ವ್ಯತ್ಯಾಸಗಳು, ಸುಳಿವು, ಜಾರಿಕೊಳ್ಳುವ ಧೋರಣೆಗಳನ್ನು ಹೇಗೆ ಅನುಸಂಧಾನಮಾಡಬೇಕು ಎಂಬ ಮಾರ್ಗಗಳನ್ನು ತಿಳಿಸುತ್ತಲೇ, ಯಾವುದು ವ್ಯಕ್ತವಾಗುತ್ತದೋ, ವ್ಯಕ್ತವಾಗುವುದಿಲ್ಲವೋ ಎರಡನ್ನೂ ವ್ಯತ್ಯಾಸವಿಲ್ಲದಂತೆ ಗೌಪ್ಯವಾಗಿಡಲು ಪ್ರಯತ್ನಿಸುತ್ತವೆ. ಪ್ರತಿಯೊಂದು ಸಂಸ್ಕೃತಿ 'ಪಠ್ಯ'ದಲ್ಲಿ ಕಾರ್ನಫ್ಲೇಕ್ಸ್ ನ ಪೊಟ್ಟಣದಿಂದ Canaletto ದವರೆಗೂ ಪಠ್ಯದೊಳಗಿಂದಲೇ ವಿರೋಧ ವ್ಯಕ್ತವಾಗುತ್ತಿರುತ್ತದೆ, ಮತ್ತು ಪ್ರತಿಯೊಬ್ಬ ಸಂಸ್ಕೃತಿ

ಅಧ್ಯಯನಕಾರನಿಗೂ ಅನೇಕ ಕಾರಣಗಳಿಗಾಗಿ ಇದು ಮುಖ್ಯ. ಮೊದಲನೆಯದಾಗಿ ಯಾವ ಮೌಲ್ಯವೂ, ಯಾವ ಸ್ಥಿತಿಯೂ, ಯಾವ ನಿಯಮವೂ ಪ್ರಶ್ನಿಸಲಾಗದಷ್ಟು ಚಲನರಹಿತ ಅಥವಾ ಸ್ಥಿತವಲ್ಲ. ಪಠ್ಯದೊಳಗೇ ಅಡಕವಾಗಿರುವ 'ಅನ್ಯ'ವು ಬದಲಾವಣೆಯ ಸಾಧ್ಯತೆಯನ್ನು ಹೆಚ್ಚಿಸುತ್ತದೆ. ಎರಡನೆಯದಾಗಿ ಈ ಅಸ್ಥಿರತೆಯೇ ಬದಲಾವಣೆಯನ್ನು ತರಬಯಸುವವರಿಗೆ ಒತ್ತಡದ ನೆಲೆಯನ್ನು ಕಲ್ಪಿಸುತ್ತದೆ. ಅರ್ಥದ ರಾಜಕಾರಣವು ಕೇವಲ ಸೂಚಿತ ಚಿಹ್ನೆ (referential) ಅಲ್ಲ. ಅರ್ಥಗಳು ನಮ್ಮ ನಂಬಿಕೆ ಭರವಸೆಗಳಿಗೆ ಮತ್ತು ವಸ್ತುಗಳು ಹೇಗಿವೆಯೋ ಹಾಗೆ ಅರಿವಾಗಲು ಮುಖ್ಯವಾದರೆ, ಈ ಅರ್ಥಗಳೇ ಸಂಘರ್ಷಕ್ಕೆ ವೇದಿಕೆಯಾಗುತ್ತದೆ. ಮೂರನೆಯದಾಗಿ, ಈ ಅರ್ಥಗಳ ಬಹುತ್ವದಲ್ಲಿ, ಬದಲಾವಣೆಯ ನಿರಂತರ ಸಾಧ್ಯತೆಗಳನ್ನು ಹೊರಗಿಡಲಾಗುವ (ಈ ಬಹುತ್ವಗಳು ಪಾರದರ್ಶಕ ಮತ್ತು ಅನಿವಾರ್ಯವೆಂದೆನಿಸುವಂತೆ) ಕಾರಣಗಳಲ್ಲಿಯೇ, ನಮ್ಮ ಭರವಸೆ, ನಂಬಿಕೆಗಳನ್ನು ಹತೋಟಿಯಲ್ಲಿಡುವ ನಿಯಮಗಳಿಗೆ ಪರ್ಯಾಯವಾದದನ್ನು ಗುರುತಿಸಬಹುದು.

ಅದೂ ಅಲ್ಲದೆ, ಸಂಸ್ಕೃತಿ ಪಠ್ಯಗಳ ಮೋಹಕ ಹುನ್ನಾರಗಳು ಕೇವಲ ಅದರ ವಿಷಯಸಾರಕ್ಕೆ ಸೀಮಿತವಾಗಿರುವುದಿಲ್ಲ, ಆದರೆ ಓದುಗನನ್ನು ಹೇಗೆ ಅನುಸಂಧಾನಮಾಡಲಾಗುತ್ತದೆ, ಮತ್ತು ಅವರ ನೆಲೆ ಯಾವುದು ಎಂಬುದನ್ನು ಅವಲಂಬಿಸಿರುತ್ತದೆ. ನಮ್ಮ ಬದುಕಿನಲ್ಲಿ ಯಾವಯಾವ ಸಾಂಸ್ಕೃತಿಕ ಅರ್ಥಗಳು ಬರೆಯಲ್ಪಟ್ಟಿವೆ ಎಂದು ಅರ್ಥ ಮಾಡಿಕೊಳ್ಳಲು, ಮುಸುಕು ತೆಗೆಯುವುದು ಅಷ್ಟೇ ಸಾಲದು. ಅನ್ಯ ಮಾತುಗಳಲ್ಲಿ ಹೇಳುವುದಾದರೆ, ಕ್ರಿಯಾ ರಾಜಕಾರಣ ಅಥವಾ ಐಡಿಯಾಲಜಿಗೆ ತೆರೆದುಕೊಳ್ಳುವುದಷ್ಟೇ ಅಲ್ಲದೇ, ಓದುವ ರಾಜಕಾರಣವೂ ಇದೆ.

ಮುಂದುವರೆಯುತ್ತದೆ............

ಕನ್ನಡಕ್ಕೆ :

– ಡಾ. ಕೆ.ಬಿ. ಸರಸ್ವತಿ

**ಅಡಿ ಟಿಪ್ಪಣಿಗಳು:**

*1 ಸಾಮಾನ್ಯ ಜನರ ಹಕ್ಕು, ಅರಿವು ಮತ್ತು ಸದ್ಗುಣಗಳನ್ನು ನಂಬಿ ಅವಲಂಬಿಸುವ ಯಾವುದೇ ಚಳುವಳಿ.

*2 ಬದಲಾವಣೆಗೆ ವಿರೋಧಿ, ಪರಂಪರೆಯನ್ನು ರಕ್ಷಿಸಿ, ಪೋಷಿಸುವ ರಾಜಕೀಯ ಐಡಿಯಾಲಜಿ.

Prathispanda Kannada Monthly literary cultural periodical Title verification no.- KARKAN 22840/10/1/2012 TC

Book Post

ವಿಳಾಸ:
ಪ್ರತಿಸ್ಪಂದ
ತೋಟದ ಮನೆ ನಂ: 107 (25)
ಕಂಚಾಘಟ್ಟ ಹೊಸ ಬಡಾವಣೆ
ತಿಪಟೂರು – 572201

Editor and Publisher : K.R.Basavaraju, Farm House No : 107 (25)
Kanchagatta New Extension , Tiptur- 572201, Karnataka. Email : prathispandha@gmail.com
Printed at : Mithra DTP Works, Nittur